ಕನಕ ಸಾಹಿತ್ಯ ದರ್ಶನ ಸಂಪುಟ ೨

# ಕನಕದಾಸರ ಕಾವ್ಯ ಭಾಗ–೧

## (ಹರಿಭಕ್ತಿಸಾರ, ರಾಮಧಾನ್ಯ ಚರಿತ್ರೆ ಮತ್ತು ನಳಚರಿತ್ರೆ)

ಸಂಪಾದಕರು

**ಡಾ. ಸಾ.ಶಿ. ಮರುಳಯ್ಯ**

ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು – ೫೬೦ ೦೦೨

**KANAKA SAHITYA DARSHANA Vol-2** : A reprint of collection of poetical works of Kanakadasa; Edited by **Dr. S.S. Marulaiah;** Published by **Dr. Manu Baligar**, Commissioner, Department of Kannada and Culture, Kannada Bhavan, J.C.Road, Bengaluru - 560 002.



ಮೊದಲ ಮುದ್ರಣ : ೧೯೯೧
ಎರಡನೆ ಮುದ್ರಣ : ೨೦೧೨
ಪ್ರತಿಗಳು : ೧೦೦೦
ಪುಟಗಳು : xxvi + ೨೧೮
ಬೆಲೆ : ರೂ. ೫೦/–

ರಕ್ಷಾಪುಟ ವಿನ್ಯಾಸ : **ಯು.ಟಿ. ಸುರೇಶ್**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**
ನಂ. ೬೯, ಸುಬೇದಾರ್ ಛತ್ರಂ ರೋಡ್
ಬೆಂಗಳೂರು – ೫೬೦ ೦೨೦ ದೂ : ೨೩೩೪೨೭೨೪

# ಪ್ರಕಾಶಕರ ಮಾತು

ಕನಕದಾಸರು ಕವಿ ವಿಶಿಷ್ಟವಾದ ಸಹಜ ಪ್ರತಿಭೆಯಿಂದ, ಉದಾರತೆಯಿಂದ, ವಸ್ತುವೈವಿಧ್ಯ ಹಾಗೂ ಛಂದೋ ವೈವಿಧ್ಯತೆಯಿಂದ, ಸಮಕಾಲೀನ ಪ್ರಜ್ಞೆಯಿಂದ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಕನಕದಾಸರು ದಾಸರಲ್ಲಿ ಕವಿಗಳು ಇದೇ ಅವರ ವೈಶಿಷ್ಟ್ಯ. ಕನಕದಾಸರು ಹಲವಾರು ಭಾವಪೂರ್ಣ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಸಾಹಿತ್ಯ ರಚನೆ ಕೇವಲ ಕೀರ್ತನೆಗಳಿಗೆ ಸೀಮಿತಗೊಳ್ಳದೆ, ಮೋಹನತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯಚರಿತ್ರೆ, ನೃಸಿಂಹಸ್ತವ ಎಂಬ ಕೃತಿಗಳನ್ನೂ ರಚಿಸಿದ್ದಾರೆ. ನೃಸಿಂಹಸ್ತವ ಉಪಲಬ್ಧವಿಲ್ಲ. ತತ್ತ್ವ–ನೀತಿ ಭಕ್ತಿಗಳಿಂದ ಮುಪ್ಪುರಿಗೊಂಡ ಹರಿಭಕ್ತಿಸಾರ, ನಳದಮಯಂತಿಯರ ಹೃದಯಸ್ಪರ್ಶಿಯಾದ ಪಾತ್ರ ಚಿತ್ರಣದ ನಳಚರಿತ್ರೆ, ಜನಾದರಣೀಯವಾಗಿದೆ. ಅಂದಿನ ಸಮಾಜದಲ್ಲಿ ನೆಲಸಿದ್ದ ವರ್ಗ, ವರ್ಣದ ಅಂತರವನ್ನು ವ್ಯಂಗ್ಯವಾಗಿ, ಮಾರ್ಮಿಕವಾಗಿ ಎತ್ತಿತೋರಿಸುವ ರಾಮಧಾನ್ಯಚರಿತ್ರೆಯು ವಿನೂತನವಾಗಿದ್ದು, ಕನ್ನಡ ಕಾವ್ಯಲೋಕದಲ್ಲಿ ಅನನ್ಯ ಕೃತಿಯೆನಿಸಿದೆ. ಕನಕದಾಸರು ತಮ್ಮ ಸ್ವೋಪಜ್ಞ ಸಾಧನೆ–ಸಿದ್ಧಿಗಳಿಂದ ದಾಸ ಪರಂಪರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ.

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ದಾಸಶ್ರೇಷ್ಠರಲ್ಲಿ ಒಬ್ಬರಾದ ಕನಕದಾಸರ ೫೦೦ನೆಯ ಜಯಂತ್ಯುತ್ಸವದ ಅಂಗವಾಗಿ ಡಾ. ದೇ. ಜವರೇಗೌಡ ಅವರ ಅಧ್ಯಕ್ಷತೆಯಲ್ಲಿ ಡಾ. ಹೆಚ್.ಜೆ. ಲಕ್ಕಪ್ಪಗೌಡ, ಡಾ. ಬರಗೂರು ರಾಮಚಂದ್ರಪ್ಪ ಮತ್ತು ಡಾ. ಸಾ.ಶಿ. ಮರುಳಯ್ಯನವರನ್ನೊಳಗೊಂಡ ಸಂಪಾದಕ ಮಂಡಳಿಯನ್ನು ರಚಿಸಿ, ಕನಕದಾಸರ ಸಮಗ್ರ ಸಾಹಿತ್ಯವನ್ನು ಕನಕಸಾಹಿತ್ಯ ದರ್ಶನ ಎಂಬ ಹೆಸರಿನಲ್ಲಿ ನಾಲ್ಕು ಸಂಪುಟಗಳಲ್ಲಿ ಹೊರತಂದಿತ್ತು.

ಕನಕ ಸಾಹಿತ್ಯ ದರ್ಶನದ ನಾಲ್ಕು ಸಂಪುಟಗಳು ಅಲಭ್ಯವಾಗಿದ್ದು, ಅದಕ್ಕೆ ಸಾರ್ವಜನಿಕರಿಂದ ಅಪಾರ ಬೇಡಿಕೆಯಿರುವುದರಿಂದ ಪ್ರಸಕ್ತ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಮೂರು ಸಂಪುಟಗಳನ್ನು ಶೀರ್ಷಿಕೆಯಲ್ಲಿ ಅಲ್ಪ ಬದಲಾವಣೆಯೊಂದಿಗೆ ಮರುಮುದ್ರಣ ಮಾಡಲಾಗುತ್ತಿದೆ ಮತ್ತು ಹೊಸದಾಗಿ ಪ್ರೊ॥ ಸುಧಾಕರ ಅವರು ಸಂಪಾದಿಸಿರುವ ಮೋಹನ ತರಂಗಿಣಿ ಕೃತಿಯನ್ನು ಗದ್ಯಾನುವಾದದೊಂದಿಗೆ ಪ್ರಕಟಿಸಲಾಗುತ್ತಿದೆ.

ಕನಕದಾಸರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಮರುಮುದ್ರಿಸಲು ಸಹಕರಿಸಿದ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದವರಿಗೂ, ಈ ಸಂಪುಟದ ಸಂಪಾದಕರಾದ ಡಾ. ಸಾ.ಶಿ. ಮರುಳಯ್ಯ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಸದರಿ ಸಂಪುಟಗಳನ್ನು ಹೊರತರಲು ಒಪ್ಪಿಗೆ ನೀಡಿದ ಇಲಾಖೆಯ ಕಾರ್ಯದರ್ಶಿಗಳಾದ

ಶ್ರೀ ಬಸವರಾಜು ಅವರಿಗೂ, ಈ ಸಂಪುಟಗಳನ್ನು ಹೊರತರಲು ಸಹಕರಿಸಿದ ಶ್ರೀ ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು (ಆಡಳಿತ), ಶ್ರೀ ಬಲವಂತರಾವ್ ಪಾಟೀಲ್, ಜಂಟಿ ನಿರ್ದೇಶಕರು (ಸು.ಕ.), ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ, ಕಾರ್ಯಕ್ರಮ ಅಧಿಕಾರಿ ಮತ್ತು ಪ್ರಕಟಣಾ ಶಾಖೆಯ ಸಿಬ್ಬಂದಿಯವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಸಂಪುಟಗಳನ್ನು ಅಂದವಾಗಿ ಮುದ್ರಿಸಿಕೊಟ್ಟ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರು ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

ಕನ್ನಡ ಹರಿದಾಸ ಪರಂಪರೆಯಲ್ಲಿ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವವುಳ್ಳ ಕನಕದಾಸರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಕನ್ನಡಿಗರಿಗೆ ಒದಗಿಸುವುದು ನಮ್ಮ ಆಶಯವಾಗಿದೆ. ಈ ಸಂಪುಟಗಳ ಪ್ರಯೋಜನವನ್ನು ಓದುಗರು ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

೧೮.೦೧.೨೦೧೨

**ಡಾ. ಮನು ಬಳಿಗಾರ್**
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಮೊದಲ ಮುದ್ರಣದ ಮುನ್ನುಡಿ

ದಾಸ ಸಮುದಾಯದಲ್ಲಿ ಕನಕದಾಸರಿಗೆ ವಿಶಿಷ್ಟವಾದ ಸ್ಥಾನವಿದೆ. ಅವರ ಸಾಹಿತ್ಯ ರಚನೆ ಕೀರ್ತನೆಗಳಿಗಷ್ಟೇ ಸೀಮಿತಗೊಳ್ಳಲಿಲ್ಲ. ಅವರು ಅಣಕು ಮಹಾಕಾವ್ಯ, ಮಹಾಕಾವ್ಯ, ಪೂರ್ಣಕಾವ್ಯ, ಶತಕಗಳನ್ನು ಸಹ ರಚಿಸಿದ್ದಾರೆ. ಇವುಗಳ ಪೈಕಿ ಹರಿಭಕ್ತಿಸಾರ ಮತ್ತು ನಳಚರಿತ್ರೆಗಳು ಪಾಮರ ಪಂಡಿತರಿಂದ ಏಕಪ್ರಕಾರವಾಗಿ ಮನ್ನಣೆ ಪಡೆದಿವೆ. 'ಗಿಳಿಯ ಮರಿಯನು ತಂದು ಪೋಷಿಸಿ'; 'ಎಂಜಲೆಂಜಲು ಎಂಬರಾ ನುಡಿ ಎಂಜಲಲ್ಲವೆ'; 'ದೀನ ನಾನು ಸಮಸ್ತ ಲೋಕಕೆ ದಾನಿ ನೀನು', 'ವನಿತೆ ಮಲಗಿಹಳೋ ಅಧೈರ್ಯದಿ ನೆನೆವಳೋ ದೈವವನು'; 'ದೊಡ್ಡ ಹೊಟ್ಟೆಯ ಗೂನು ಬೆನ್ನಿನ'– ಈ ಸಾಲುಗಳಿಂದ ಪ್ರಾರಂಭವಾಗುವ ಪದ್ಯಗಳು ಹಳ್ಳಿಯ ನಿರಕ್ಷರಿಗಳ ನಾಲಗೆಗಳ ಮೇಲೆ ಕುಣಿದಾಡುವುದನ್ನು ನಾನೆ ಕೇಳಿದ್ದೇನೆ. ಸರ್ವಜ್ಞನ ತ್ರಿಪದಿಗಳಂತೆ ಕನಕದಾಸರ ಹರಿಭಕ್ತಿಸಾರದ ಪದ್ಯಗಳು ಸಹ ಬಹು ಜನಪ್ರಿಯವಾಗಿವೆ. ಹಬ್ಬಹರಿದಿನಗಳಲ್ಲಿ ಹಾಗೂ ವಿಶೇಷ ಸಂದರ್ಭಗಳಲ್ಲಿ ಕುಮಾರವ್ಯಾಸಭಾರತ ಜೈಮಿನಿ ಭಾರತಗಳನ್ನೆಂತೊ ಅಂತೆಯೇ ಕನಕದಾಸರ ನಳಚರಿತ್ರೆಯನ್ನು ಸಹ ಗ್ರಾಮೀಣರು ಓದಿಸಿ, ಕೇಳಿ, ಕೃತಾರ್ಥರಾದವರಂತೆ ಸಮಾಧಾನಗೊಳ್ಳುತ್ತಾರೆ. ತತ್ತ್ವ ನೀತಿ ಭಕ್ತಿಗಳ ತ್ರಿವೇಣಿ ಸಂಗಮದಿಂದ ಹರಿಭಕ್ತಿಸಾರವೂ ಸುಲಿದ ಬಾಳೆಯ ಹಣ್ಣಿನಂತೆ, ಗೂಡಿನಿಂದ ಇಳಿದ ಜೇನಿನಂತೆ ಸ್ವಾದುವಾಗಿರುವ ಸರಸ ಶೈಲಿಯಿಂದ, ಅಸಂಕೀರ್ಣವಾದ ಕತೆಯ ನಿರರ್ಗಳತೆಯಿಂದ ನಳದಮಯಂತಿಯರ ಹೃದಯಸ್ಪರ್ಶಿಯಾದ ಪಾತ್ರ ಚಿತ್ರಣದಿಂದ ನಳಚರಿತ್ರೆಯೂ ಸರ್ವಜನಾದರಣೀಯವಾಗಿವೆ. ವರ್ಗ ವರ್ಣ ಜಾತಿಭೇದಗಳನ್ನು ರೂಪಕದ ಮೂಲಕ ವಿಡಂಬಿಸುವ ರಾಮಧಾನ್ಯ ಚರಿತೆ ಸ್ವಾರಸ್ಯಕರವೂ, ಕನ್ನಡ ಕಾವ್ಯ ಸಮುದಾಯದಲ್ಲಿ ಅತ್ಯಪೂರ್ವವೂ ಆದ ವಿನೂತನ ಕಾವ್ಯ.

ಬಾಳಿನ ಪರಿಪೂರ್ಣತೆಗೆ ಅಶನವಸನವಸತಿಗಳ ಜತೆಗೆ, ಮನಸ್ಸಿನ ಆರೋಗ್ಯ ಕ್ಕನುವಾಗುವಂಥ, ಹೃದಯವನ್ನು ಸಂಸ್ಕರಿಸುವಂಥ ಸಾಹಿತ್ಯ ಕಲೆಗಳು ಎಲ್ಲ ಮಾನವರಿಗೂ ಬೇಕು. ಶ್ರೀಸಾಮಾನ್ಯರ ನಡುವೆ ಹುಟ್ಟಿ ಬೆಳೆದು, ಅವರ ಅಭಿರುಚಿ ಅಭೀಷ್ಟಗಳನ್ನರಿತಿದ್ದ, ಸಾಧನೆ ತಪಸ್ಸಿನಿಂದ, ಸ್ವಸಾಮರ್ಥ್ಯದಿಂದ ಅದ್ವಿತೀಯ ಸಿದ್ಧಿಯನ್ನು ಪಡೆದಿದ್ದ, ಕನಕದಾಸರ ಕೃತಿಗಳು ಶ್ರೀಸಾಮಾನ್ಯನಿಗೆ ವರಗಳಾಗುತ್ತವೆನ್ನು ವುದರಲ್ಲಿ ಸಂಶಯವಿಲ್ಲ. ಅವು ಸುಲಭವಾಗಿ ಶ್ರೀಸಾಮಾನ್ಯನನ್ನು ಸೇರಲೆಂಬ ದೃಷ್ಟಿಯಿಂದಲೇ ಕರ್ನಾಟಕ ಸರ್ಕಾರ ಅವನ್ನು ಪ್ರಕಟಿಸುವ ಯೋಜನೆಯನ್ನು ಹಮ್ಮಿಕೊಂಡು ೧೯೮೯ರಲ್ಲಿ ಸಂಪಾದಕ ಮಂಡಲಿಯೊಂದನ್ನು ನೇಮಿಸಿತು.

ಈಗಾಗಲೇ ಸಮಿತಿ ಜನಪ್ರಿಯ ಕನಕ ಸಂಪುಟವನ್ನೂ, ಸಮಗ್ರ ಕನಕ ಸಾಹಿತ್ಯ ದರ್ಶನದ ಪ್ರಥಮ ಸಂಪುಟವನ್ನೂ ಕನ್ನಡ ಮತ್ತು ಸಂಸ್ಕೃತಿ

ನಿರ್ದೇಶನಾಲಯಕ್ಕೆ ಸಂಪಾದಿಸಿಕೊಟ್ಟಿದೆ. ಇದೀಗ ಹರಿಭಕ್ತಿಸಾರ, ರಾಮಧಾನ್ಯಚರಿತ್ರೆ ಮತ್ತು ನಳಚರಿತ್ರೆ ಗಳನ್ನೊಳಗೊಂಡ ಎರಡನೆಯ ಸಂಪುಟ ಹೊರಬರುತ್ತಿದೆ. ಕನ್ನಡ ನಾಡಿನ ಖ್ಯಾತ ವಿದ್ವಾಂಸರೂ, ಕವಿಗಳೂ, ವಾಗ್ಮಿಗಳೂ ಸಮಿತಿಯ ಸದಸ್ಯರೂ ಆದ ಪ್ರಾಧ್ಯಾಪಕ ಡಾ॥ ಸಾ.ಶಿ. ಮರುಳಯ್ಯನವರು ಶಾಸ್ತ್ರಬದ್ಧವಾಗಿ ಈ ಮೂರೂ ಕೃತಿಗಳನ್ನು ಪರಿಷ್ಕರಿಸಿಕೊಟ್ಟಿದ್ದಾರೆ. ಸಾಮಾನ್ಯ ವಾಚಕರಿಗೂ ಇದು ತಲುಪಬೇಕೆಂಬ ಉದ್ದೇಶವನ್ನಿಟ್ಟುಕೊಂಡದ್ದರಿಂದ ಪಾಠಾಂತರಗಳನ್ನು ಕೊಟ್ಟಿಲ್ಲ. ಆದರೆ ಉಪಯುಕ್ತವೂ ವಿದ್ವತ್ಪೂರ್ಣವೂ ಆದ ಪೀಠಿಕೆಯನ್ನವರು ಇದರಲ್ಲಿ ಸೇರಿಸಿದ್ದಾರೆ. ಅವರಿಗೆ ನನ್ನ ನಮನಗಳು.

ಆದಷ್ಟು ಬೇಗ ಡಾ. ಎಚ್.ಜೆ. ಲಕ್ಕಪ್ಪಗೌಡರು ಮತ್ತು ಪ್ರೊ॥ ಸುಧಾಕರ ಅವರು ಪರಿಷ್ಕರಿಸುತ್ತಿರುವ ಕನಕ ಸಾಹಿತ್ಯ ದರ್ಶನದ ಮೂರು (ಮೋಹನ ತರಂಗಿಣಿ) ಮತ್ತು ನಾಲ್ಕನೆಯ (ಕೀರ್ತನೆಗಳು, ಮುಂಡಿಗೆಗಳು) ಸಂಪುಟಗಳನ್ನು ಪ್ರಕಟಿಸಲಾಗುತ್ತದೆ. ಈ ಸಂದರ್ಭದಲ್ಲಿ ಪ್ರೊ॥ ಬರಗೂರು ರಾಮಚಂದ್ರಪ್ಪನವರು ಸೇರಿಕೊಂಡು ಮೇಲೆ ಕಾಣಿಸಿರುವ ಎಲ್ಲ ಸದಸ್ಯ ಮಿತ್ರರು ನೀಡುತ್ತಿರುವ ಸಹಕಾರ ಸಲಹೆಗಳಿಗಾಗಿ ಅವರನ್ನು ಕೃತಜ್ಞತಾಪೂರ್ವಕವಾಗಿ ವಂದಿಸುತ್ತೇನೆ.

ಈ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಅಂದಿನ ಮತ್ತು ಇಂದಿನ ನಿರ್ದೇಶಕರು/ಆಯುಕ್ತರು ಶ್ರೀ ಐ.ಎಂ. ವಿಠ್ಠಲಮೂರ್ತಿ, ಶ್ರೀ ಬಿ. ಪಾರ್ಥಸಾರಥಿ ಮತ್ತು ಡಾ॥ ಪಿ.ಎಸ್. ರಾಮಾನುಜಂ – ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ತುಂಬ ಆಸಕ್ತಿವಹಿಸಿ, ಕಾಲಕಾಲಕ್ಕೆ ಸೂಕ್ತ ಸಲಹೆಗಳನ್ನು ನೀಡುತ್ತಿದ್ದಾರೆ. ಅವರಿಗೆ ನನ್ನ ಮತ್ತು ಸಮಿತಿಯ ಹೃತ್ಪೂರ್ವಕ ವಂದನೆಗಳು ಸಲ್ಲಬೇಕು. ಈ ಯೋಜನೆಯನ್ನು ಮಂಜೂರು ಮಾಡಿ, ಕನ್ನಡಿಗರ ಅಭೀಪ್ಸೆಯನ್ನು ಪೂರೈಸುತ್ತಿರುವ ಕರ್ನಾಟಕ ಸರ್ಕಾರ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರಾದ ಶ್ರೀ ಎಸ್. ರಮೇಶ್ ಅವರು ಅಭಿನಂದನೀಯರು. ಇಲಾಖೆಯ ಸನ್ಮಿತ್ರರಾದ ಸರ್ವಶ್ರೀ ದೇವರಸಯ್ಯ, ಕಾ.ತ. ಚಿಕ್ಕಣ್ಣ, ಸಿದ್ದೇಗೌಡರಾದಿಯಾಗಿ ಎಲ್ಲ ಸಿಬ್ಬಂದಿವರ್ಗದ ಸಹಕಾರಕ್ಕಾಗಿ ಅವರಿಗೆ ನನ್ನ ಮತ್ತು ಸಮಿತಿಯ ಧನ್ಯವಾದಗಳು

ಮೈಸೂರು–೧೨ **ದೇ. ಜವರೇಗೌಡ**
೨೮–೧–೧೯೯೧ ಸಂಪಾದಕ ಮಂಡಳಿಯ ಪರವಾಗಿ

# ಮೊದಲ ಮುದ್ರಣದ ನನ್ನ ಮಾತು

ನಾಡಿನ ಪುಣ್ಯದ ಫಲವಾಗಿ ಮಹಾಕವಿಯೊಬ್ಬನು ಉದಯಿಸುತ್ತಾನೆ. ಅಂತಹ ಪುಣ್ಯವಿದ್ದುದರಿಂದಲೇ ಕನಕದಾಸರಂತಹ ಸಂತಕವಿಯನ್ನು ಕನ್ನಡನಾಡು ಕಾಣಲು ಸಾಧ್ಯವಾಯಿತು. ಆ ಕವಿಶ್ರೇಷ್ಠರ ಬದುಕು ಮತ್ತು ಕೃತಿಗಳನ್ನು ಕುರಿತಂತೆ ಈಗಾಗಲೇ ಸಾಕಷ್ಟು ಕೆಲಸ ನಡೆದಿದೆ; ನಡೆಯುತ್ತಲೂ ಇದೆ. ಆ ಬಗೆಯ ಸ್ತುತ್ಯಕಾರ್ಯಕ್ಕೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮುಂದೆ ಬಂದಿರುವುದು ನಿಜಕ್ಕೂ ಪ್ರಶಂಸನೀಯ. ಈ ಹಿಂದೆ ಪ್ರೊ॥ ದೇಜಗೌರವರ ದಕ್ಷ ಅಧ್ಯಕ್ಷತೆಯಲ್ಲಿ ವಿವಿಧ ಲೇಖಕರ ವಸ್ತುನಿಷ್ಠ ವಿಮರ್ಶೆಗಳ ಒಂದು ಬೃಹತ್ ಸಂಪುಟ– 'ಕನಕ ಸಂಪುಟ–೧' ಇಲಾಖೆಯ ವತಿಯಿಂದ ಹೊರಬಿದ್ದಿದೆ. ನಾನೆತ್ತಿಕೊಂಡು ಪೂರ್ಣಗೊಳ್ಳುತ್ತಿರುವ ಈ ಮಹಾಸಂಪುಟ 'ಕನಕ ಸಂಪುಟ–೨' ಈ ಮಾಲಿಕೆಯಲ್ಲಿ ಇನ್ನೂ ಎರಡು–ಮೂರು ಸಂಪುಟಗಳು ಬರಲಿವೆ. ಎಲ್ಲವೂ ಬಂದು ಪೂರ್ಣಗೊಂಡಂದು ಕನಕದಾಸರು ಇಡಿಯಾಗಿ ನಮಗೆ ಸಿಗುವ ಸಾಧ್ಯತೆ ಇದೆ. ಆ ದಿನ ಬೇಗ ಬರಲಿ ಎಂದು ಆಶಿಸುತ್ತೇನೆ.

ಪ್ರಸಕ್ತ ಸಂದರ್ಭದಲ್ಲಿ ನನ್ನ ಪೂಜ್ಯ ಗುರುಗಳಾದ ದೇಜಗೌರವರ ಮಾರ್ಗದರ್ಶನದಂತೆ ಈ ಮಹಾಸಂಪುಟವನ್ನು ಸಿದ್ಧಪಡಿಸಿ ಕನ್ನಡಿಗರ ಕೈಗಿರಿಸುತ್ತಿದ್ದೇನೆ. ನೀವು ಇದನ್ನು ಆದರದಿಂದ ಸ್ವಾಗತಿಸಿದರೆ ನನ್ನ ಶ್ರಮ ಸಾರ್ಥಕ. ಕಡೆಯದಾಗಿ ಈ ಕೃತಿಯ ನಿರ್ಮಿತಿಗೆ ಮೂಲಕಾರಣವೆನಿಸಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರಾದ ಸಾಹಿತಿ ಮಿತ್ರರಾದ ಡಾ॥ ಪಿ.ಎಸ್. ರಾಮಾನುಜಂರವರಿಗೆ, ಸಹಕರಿಸಿದ ಸಂಪಾದಕ ಮಂಡಲಿಗೆ, ನೆರವಾದ ಮಿತ್ರರುಗಳಾದ ಎಸ್. ರಾಮಚಂದ್ರಶಾಸ್ತ್ರೀ, ದೇವರಸಯ್ಯ, ಕಾ.ತ. ಚಿಕ್ಕಣ್ಣ, ಸಿದ್ದೇಗೌಡ, ಕೆ. ಸುಧೀಂದ್ರ, ಹೆಚ್.ಸಿ. ರಂಗಪ್ಪ ಮತ್ತು ಎನ್.ಚಕ್ರಪಾಣಿ, ಸೋದರಿಯರಾದ ಹೇಮಾ ಶ್ರೀನಿವಾಸಮೂರ್ತಿ ಮತ್ತು ನಾಗರತ್ನಾ ಶಾಂತಮಲ್ಲಪ್ಪ– ಇವರಿಗೆ, ಅನಿಮಿತ್ತ ಬಂಧು ಸ್ವಪ್ರಭಾನಂದ ಶರ್ಮ ಮತ್ತು ಮಿಕ್ಕೆಲ್ಲ ಪ್ರೇರಕ ಶಕ್ತಿಗಳಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

'ರಾಗಿಣಿ'
೫–೧೧–೧೯೯೧

**ಸಾ.ಶಿ. ಮರುಳಯ್ಯ**

# ಪರಿವಿಡಿ

# ಪ್ರಸ್ತಾವನೆ

ಶಿವಗಂಗೆ ಬೆಟ್ಟ ನಾಲ್ಕು ದಿಕ್ಕುಗಳಲ್ಲೂ ನಾಲ್ಕು ರೂಪವಾಗಿ ಕಾಣಿಸಿಕೊಳ್ಳುತ್ತದೆ. ಪೂರ್ವ ಮುಖದಲ್ಲಿ ಕಾಲೂರಿ ಮಲಗಿರುವ ಬಸವನಾಕಾರವಾಗಿ, ಪಶ್ಚಿಮದಲ್ಲಿ ನಿಶ್ಚಲವಾಗಿ ಕುಳಿತಿರುವ ಶಿವಲಿಂಗಾಕಾರವಾಗಿ, ಉತ್ತರದಲ್ಲಿ ಇಳಿಬಿಟ್ಟ ಸೊಂಡಿಲಿನ ಆನೆಯಾಕಾರವಾಗಿ, ದಕ್ಷಿಣದಲ್ಲಿ ಹೆಡೆತೆರೆದ ಸರ್ಪಾಕಾರವಾಗಿ. ಬೆಟ್ಟ ಒಂದೇ ಆದರೂ ನೋಟ ನಾಲ್ಕು ! ವ್ಯಕ್ತಿಯ ವ್ಯಕ್ತಿತ್ವ ಅಂಥದು. ವ್ಯಕ್ತಿಗೆ ಒಂದು ಮುಖವಾದರೆ ವ್ಯಕ್ತಿತ್ವಕ್ಕೆ ನಾನಾ ಮುಖಗಳು: ಹರಿಯುವ ನೀರಿನಂತೆ, ಉರಿಯುವ ಜ್ಯೋತಿಯಂತೆ! ಒಂದು ವ್ಯಷ್ಟಿ, ಮತ್ತೊಂದು ಸಮಷ್ಟಿ; ಒಂದು ಪುರುಷ, ಮತ್ತೊಂದು ಪುರುಷಾಕಾರ (Personality); ಒಂದು ಸ್ಥಾವರ, ಮತ್ತೊಂದು ಜಂಗಮ; ಇದು ಮೃಣ್ಮಯದ ಮೂರ್ತಿ, ಅದು ಚಿನ್ಮಯದ ಚೇತನ; ಇದು ಮಾನವ, ಅದು ವಿಶ್ವಮಾನವ; ಒಂದರಲ್ಲಿ ವ್ಯಕ್ತಿಗತ ವೈಪರೀತ್ಯಗಳಿದ್ದರೆ, ಮತ್ತೊಂದರಲ್ಲಿ ವಿಶ್ವಋತು ವೈಶಿಷ್ಟ್ಯಗಳು ಮೆರೆದಿರುತ್ತವೆ.

ವಸ್ತುಸ್ಥಿತಿ ಹೀಗಿದ್ದರೂ ಇಂದು ಅಪ್ರಸ್ತುತ(Irrelevant)ಕ್ಕೇ ಆದ್ಯತೆ ಸಿಗುತ್ತಿರುವುದು ಒಂದು ವಿಪರ್ಯಾಸ! ರಾಘವಾಂಕ ದಲಿತ ಸಮಸ್ಯೆಯನ್ನು ಕೈಗೆತ್ತಿಕೊಂಡು, ದಲಿತೋದಯ ಅಥವಾ ದಲಿತೋದ್ಧಾರವನ್ನು ವೈಭವೀಕರಿಸಿದ್ದಿದ್ದರೆ ಹರಿಶ್ಚಂದ್ರಕಾವ್ಯ ವಿಶ್ವಸಾಹಿತ್ಯದಲ್ಲಿ ದಾಖಲೆ ನಿರ್ಮಿಸಿದ ಒಂದು ಮಹಾಕಾವ್ಯ ವಾಗುತ್ತಿತ್ತು ಎಂದು ಇಪ್ಪತ್ತನೆಯ ಶತಮಾನದ ವೇದಿಕೆಯ ಮೇಲೆ ನಿಂತು ಹದಿಮೂರನೆಯ ಶತಮಾನಕ್ಕೆ ಸಲಹೆ ಸೂಚಿಸುವ ಮಹಾಮೇಧಾವಿ ವಿಮರ್ಶಕ ರಿದ್ದಾರೆ ನಮ್ಮಲ್ಲಿ. ಇದು ಕಣ್ಣಿನ ದೋಷವೊ ಅಥವಾ ಕನ್ನಡಕದ ದೋಷವೊ, ಒಟ್ಟಿನಲ್ಲಿ ವಸ್ತುವಿನ ಸ್ಪಷ್ಟ ಚಿತ್ರ ಗೋಚರಿಸದೆ ಆಭಾಸ ಮೆರೆದಾಡಿರುವುದುಂಟು.

ಇಷ್ಟೆಲ್ಲ ಪ್ರವರದ ಹಿನ್ನೆಲೆಯಲ್ಲಿ ನನಗಿರುವುದು ಕನಕದಾಸನಂತಹ ಮಹಾ ಮಾನವರಲ್ಲಿ ದೋಷವನ್ನು ಅಧ್ಯಾಹರಿಸಿ, ಅದನ್ನು ಗುಣವೆಂಬಂತೆ ಮಾನ್ಯ ಮಾಡುತ್ತಿದ್ದೇವೆ ಎಂಬ ಸಂದೇಹ. ಇದಕ್ಕೆ ನೇರ ಗುರಿ ಕನಕದಾಸರ ರಾಮಧಾನ್ಯ ಚರಿತ್ರೆ. ಇದು ಹೇಳಿಕೇಳಿ ರಾಮಾಯಣಕ್ಕೆ ಸಂಬಂಧಿಸಿದ, ಕವಿಯ ಸ್ವಕಪೋಲ ಕಲ್ಪಿತ ಖಂಡಕಾವ್ಯ. ಇಲ್ಲಿ ಕವಿಯ ಮೂಲೋದ್ದೇಶ 'ರಾಗಿ' ಎಂಬ ಶಬ್ದಕ್ಕೆ ನಿಷ್ಪತ್ತಿ ಹೇಳುವುದು. ಅದೂ ಅಪನಿಷ್ಪತ್ತಿ. ರಾಘವ ಶಬ್ದದಿಂದ ರಾಗಿ ಬಂತೆಂದು ಹೇಳುವ ಚಮತ್ಕಾರ! ಅದಷ್ಟೇ ಈ ಕಥಾನಕದ ಮೂಲಧಾತು. ಇದರ ಗರ್ಭದಲ್ಲಿರುವುದು ರಾಮ ಮಹಿಮೆಯನ್ನು ಸಾರುವ ಭಕ್ತಿಭಾವನೆ; ಇದು ಅದರ ಮೂಲದ್ರವ್ಯ. ಇದನ್ನುಳಿದು ಬೇರೆ ಏನನ್ನೇ ಹೇಳಿದರೂ ಅದು ನಮ್ಮ ನಮ್ಮ ಊಹನೆ

ಯಾಗುತ್ತದೆಯೇ ಹೊರತು ಕನಕದಾಸರ ನೈಜಕಲ್ಪನೆ ಅನ್ನಿಸಿಕೊಳ್ಳುವುದಿಲ್ಲ. ಕೃತಿಯಲ್ಲಿ ಬರುವ ವ್ರೀಹಿ (ಬತ್ತ) ಮತ್ತು ನರೆದಲೆಗ(ರಾಗಿ)ರ ಸಂವಾದ ಪ್ರೊ॥ ದೇಜಗೌರವರಿಗೆ ಸ್ಪೃಶ್ಯ ಮತ್ತು ಅಸ್ಪೃಶ್ಯರ ನಡುವಣ ವರ್ಗ ಹೋರಾಟವಾಗಿ ಕಂಡಿದ್ದರೆ, ಡಾ॥ ಹಿ.ಶಿ. ರಾಮಚಂದ್ರೇಗೌಡರಿಗೆ ಅದು ಬಂಡಾಯದ ದನಿಯಾಗಿ ಕೇಳಿಸಿದೆ. ಅದೇ ಪ್ರಸಂಗ ಡಾ॥ ಎಂ. ಚಿದಾನಂದಮೂರ್ತಿಯವರಿಗೆ ಶ್ರೀಮಂತ ಮತ್ತು ಬಡವರ ಕುರಿತ ಒಂದು ಅಲಿಗರಿಯಾಗಿ ಗೋಚರಿಸಿದ್ದರೆ, ನನಗೆ ಸಂಸ್ಕೃತ ಮತ್ತು ಕನ್ನಡ ನಡುವಣ ಭಾಷಾವಾದವಾಗಿ ಕಂಡಿದೆ. ಮೊದಲ ಮೂವರ ಅಭಿಪ್ರಾಯಗಳನ್ನು ಓದಿಕೊಂಡ ಮೇಲೆ ನಾಲ್ಕನೆಯದಾಗಿ ನನಗೆ ಹೊಳೆದದ್ದು ಹಾಗೆ. ಅದಕ್ಕೆ ಪೋಷಕವಾಗಿ ದೊರೆತ ಆಧಾರ ವಿಜಯನಗರದ ವ್ಯಾಸರಾಯರ ಮಠದಲ್ಲಿತ್ತೆಂದು ಹೇಳಲಾದ ವ್ಯಾಸಕೂಟ ಮತ್ತು ದಾಸಕೂಟ ಎಂಬ ಎರಡು ಪಕ್ಷಗಳನ್ನು ಕುರಿತು ಐತಿಹ್ಯ. ವ್ಯಾಸರಾಯರ ಮಠದಲ್ಲಿ ಸಂಸ್ಕೃತವನ್ನಾಡುತ್ತಿದ್ದ ಮಡಿವಂತರ ವರ್ಗ ಒಂದು: ಅದು ವ್ಯಾಸಕೂಟ; ಕನ್ನಡವನ್ನಾಡುತ್ತಿದ್ದ ಸಾಮಾನ್ಯವರ್ಗ ಮತ್ತೊಂದು: ಅದು ದಾಸಕೂಟ. ಪುರಂದರದಾಸ, ಕನಕದಾಸ ಮೊದಲಾದವರು ದಾಸಕೂಟಕ್ಕೆ ಸೇರಿದ್ದವರು. ಅವರನ್ನು ಸಂಸ್ಕೃತವನ್ನಾಡುತ್ತಿದ್ದ ಮಡಿಜನ ಅಸ್ಪೃಶ್ಯರನ್ನು ಕಂಡಂತೆ ಕಾಣುತ್ತಿದ್ದರು. ಇದಕ್ಕೆ ಕನಕನ ಜೀವನದ ಘಟನೆಗಳೆಂದು ಹೇಳುವ 'ಬಾಳೆಹಣ್ಣಿನ ಪ್ರಸಂಗ', 'ನಾನು ಹೋದರೆ ಹೋಗಬಹುದು' ಎಂಬ ಪ್ರಕರಣಗಳು ಸಾಕ್ಷಿ. ವಿಜಯನಗರದ ಕಾಲಕ್ಕಾಗಲೇ ಸಂಸ್ಕೃತ ಮೃತಭಾಷೆಯಾಗಿತ್ತು. ಕನ್ನಡ ಜನಸಾಮಾನ್ಯರ ಜೀವಂತ ಭಾಷೆಯಾಗಿತ್ತು. ಮೃತಭಾಷೆಯೇ ಶ್ರೇಷ್ಠವೆಂದು ಘೋಷಿಸಿದ ವ್ಯಾಸಕೂಟದವರಿಗೂ ಜೀವಂತ ಭಾಷೆಯೇ ಶ್ರೇಷ್ಠವೆಂದು ಸಾರಿದ ದಾಸಕೂಟದವರಿಗೂ ವಾಗ್ವಾದ ನಡೆದಿದ್ದಿರಬೇಕು. ಅದರಲ್ಲಿ ಕನ್ನಡದ ಹೇಮಕೂಟರೆನಿಸಿದ ಕನಕ ಪುರಂದರರು ಗೆದ್ದಿರಬೇಕು. ಆ ತೆರೆದಿತಿಹಾಸವೇ ಭೂಮಿಗಚ್ಚರಿಯಾಗಿ ಹೇಳಿದ 'ರಾಮಧಾನ್ಯ ಚರಿತ್ರೆ' ಎಂಬಭಿಧಾನದ ಪರಿಣಾಮ ಪಡೆದಿರಬೇಕು ಎಂದೆಲ್ಲ ಊಹಿಸಿದೆ. ಊಹೆ ಕುರುಡಲ್ಲ ಎನ್ನಿಸಿತು. ಅದಕ್ಕೆ ಕಾವ್ಯದಲ್ಲಿಯೇ ಸಾಕಷ್ಟು ಪುಷ್ಟಿ ದೊರೆಯಿತು. ಗೌತಮ ಹೇಳುವ 'ದಾಶರಥಿ ಚಿತ್ತೈಸು ನಮ್ಮಯ ದೇಶಕತಿಶಯ ನರೆದಲೆಗನೇ ವಾಸಿ' ಎಂಬ ಮಾತುಗಳಲ್ಲಿ ರಾಗಿ ಬೆಳೆಯುವ ನಾಡಿಗರಿಗೆ ಕನ್ನಡವೇ ಶ್ರೇಷ್ಠ ಎಂಬ ಧ್ವನಿಯೂ, 'ಲೋಕದಲಧಿಕ ಭೋಜನವಿದೆಂದಾಕೆವಾಳರು ಬುಧರು ಜರೆದು ನಿರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ... ನೀನಾವ ಮಾನ್ಯನು' ಎಂಬ ಮಾತುಗಳಲ್ಲಿ ಕನ್ನಡ ಶೂದ್ರರು ಮತ್ತು ಸ್ತ್ರೀಯರಾಡುವ ಭಾಷೆಯೇ ಹೊರತು ಆಕೆವಾಳರು ಬುಧರು ಅಂದರೆ ಪ್ರಬುದ್ಧ ವಿದ್ವನ್ಮಣಿಗಳು ನುಡಿವ ನುಡಿಯಲ್ಲ ಎಂಬ ವ್ಯಂಗ್ಯವೂ ಅಡಗಿರುವಂತೆ ಕಂಡಿತು. 'ನೆಲ್ಲು ನಾನಿರೆ ಗೋದಿ ಮೊದಲಾದೆಲ್ಲ ಧಾನ್ಯಗಳಿರಲು ಇದರಲಿ ಬಲ್ಲಿದನು ನರೆದಲೆಗನೆಂಬುದಿದಾವ ಮತವೆಂದ' ವ್ರೀಹಿಗನ

ನುಡಿಗಳಲ್ಲಿ ಸಂಸ್ಕೃತ ಬಲ್ಲ ಪ್ರಕಾಂಡ ಪಂಡಿತರೆದುರಿನಲ್ಲಿ ಬಡಕನ್ನಡದ ಕವಿಗಳಿಗೇಕೆ ಮಾನ್ಯತೆ' ಎಂಬ ಕಿಡಿಗಳು ಕಾಣಿಸಿಕೊಂಡವು. ಅದೇ ರೀತಿ, 'ಕಡು ಜಡನಲಾ, ಸತ್ತವರ ಪ್ರತಿಬಿಂಬ ರೂಪನು' ಎಂಬ ನರೆದಲೆಗನ ಪ್ರತ್ಯುತ್ತರದ ಮಾತುಗಳಲ್ಲಿ ಸಂಸ್ಕೃತ ಮೃತಭಾಷೆ, ನಿತ್ಯ ವ್ಯವಹರಣೆಯಲ್ಲಿ ಅದು ಬಳಕೆಗೊಳ್ಳದ ಭಾಷೆ ಎಂಬಂಶ ಹೊಳೆಯಿತು. ಕಡೆಯಲ್ಲಿ ಖಿನ್ನ ಮನಸ್ಕನಾಗಿ ನಿಂತಿದ್ದ ವ್ರೀಹಿಯನ್ನು ದಾಶರಥಿ ಸನಿಹಕ್ಕೆ ಕರೆದು, ತಲೆದಡವಿ ಹೇಳುವ 'ದೀನರಲಿ ದಾರಿದ್ರ ಜನರಲಿ ನೀನು ನಿರ್ದಯನೆಂದೆನಲ್ಲದೆ ಹೀನಗಳೆದವನಲ್ಲ ನೀ ಸುರಧೇನುವಿನ ಸಮ' ಎಂಬ ಮಾತುಗಳಲ್ಲಿ ಸಂಸ್ಕೃತವನ್ನು ಉಚ್ಚರಿಸುವ ಹಕ್ಕು ಶೂದ್ರರಿಗೆ ಸ್ತ್ರೀಯರಿಗೆ ಇಲ್ಲದ್ದರಿಂದ ಶ್ರೀಸಾಮಾನ್ಯನ ಬಗ್ಗೆ ಸಂಸ್ಕೃತ ತುಂಬಾ ನಿರ್ದಯಿಯಾಗಿತ್ತು, ಆದರೆ ಕನ್ನಡವೇ ಮೊದಲಾದ ದೇಶಭಾಷೆಗಳಿಗೆ ಅದು ಸುರಧೇನುವಿನಂತೆ ಅಮೃತಧಾರೆಯನೆರೆದು ಪೋಷಿಸಿದ್ದುಂಟು ಎಂಬ ಅಂಶ ಅಡಗಿರುವುದು ವೇದ್ಯವಾಯಿತು. ಅಂತೆಯೇ 'ದೇವರಿಗೆ ಪರಮಾನ್ನ ನೀ ಮನುಜಾವಳಿಗೆ ಪಕ್ವಾನ್ನವೀತನು' ಎಂಬಲ್ಲಿ ಬದುಕಿನ ಲೋಕ ವ್ಯವಹರಣೆಗೆ ಕನ್ನಡ, ಅಧ್ಯಾತ್ಮ ವಿಚಾರವರಿಯಲು ಸಂಸ್ಕೃತ ಎರಡೂ ಬೇಕೆನ್ನುವ ಭಾವನೆ ಇತ್ತೆಂದೂ ಅದು ವ್ಯಾಸಕೂಟ ದಾಸಕೂಟದವರ ಚರ್ಚೆಯ ಅಂತ್ಯದಲ್ಲಿ ನೀಡಿದ ಗುರು ವ್ಯಾಸರಾಯರ ಸಮನ್ವಯ ಭಾವನೆಯ ನುಡಿಗಳೆಂದೂ ಊಹಿಸಿದೆ. ಬತ್ತಕ್ಕೆ 'ವ್ರೀಹಿ' ಎಂದು ಸಂಸ್ಕೃತದಲ್ಲೂ, ರಾಗಿಗೆ 'ನರೆದಲೆಗ' ಎಂದು ಶುದ್ಧ ಕನ್ನಡದಲ್ಲೂ ಕರೆದಿದೆ. ವ್ರೀಹಿ ರೋಗಿ, ನರೆದಲೆಗ ನರೆತ ತಲೆಯ ವಯೋವೃದ್ಧ, ಜ್ಞಾನವೃದ್ಧ; ಅಂದರೆ ಅಕ್ಕಿ ರಕ್ತಹೀನ ರೋಗಿಯ ಮುಖದಂತೆ ಬಿಳಿಚಿಕೊಂಡಿದ್ದರೆ, ರಾಗಿ ಬಲಿತು ಹಣ್ಣಾಗಿ ಕೊಯ್ಲಿಗೆ ಬಂದಾಗ ಅದರ ತೆನೆ ಬೆಳ್ಳಗಾಗುತ್ತೆ. ಅದರಿಂದಲೇ ನರೆತ ತಲೆಯವನು ಎಂದು ಕರೆದಿರುವುದು. ಅಕ್ಕಿಯ ಅನ್ನ ಒಂದು ಹೊತ್ತಿಗೆ ಹಳಸುತ್ತೆ, ಹಳಸಿದ ಮೇಲೆ ಹುಳು ತುಂಬಿ ಕೊಳೆಯುತ್ತೆ. ರಾಗಿ ಮುದ್ದೆ ಹಾಗಲ್ಲ, ಹಳಸುವುದೂ ತಡ, ಹಳಸಿದರೆ ಹುಳುವಾಗುವುದೂ ಇಲ್ಲ. ನೀರೊಡೆದು ಪಿಸಕಲು ಪಿಸಕಲಾಗುತ್ತೆ; ಅಷ್ಟೇ. ಅಲ್ಲದೆ ಬತ್ತ ಬೆಳೆದು ನಿಂತಾಗ ತಲೆ ಬಾಗಿಸಿಕೊಂಡರೆ, ರಾಗಿ ತಲೆ ನರೆತಿದ್ದರೂ ತಲೆ ಎತ್ತಿ ಮೆರೆಯುತ್ತದೆ. ಅದು ಮೃತ ಭಾಷೆಯ ಸಿಗ್ಗು, ಇದು ಜೀವಂತ ಭಾಷೆಯ ಹಿಗ್ಗು ಎಂಬಂಶವೂ ಧ್ವನಿತವಾಗುತ್ತದೆ.

ಇದು ಒಂದು ಕುತೂಹಲಕಾರಿ ಕಲ್ಪನೆಯೇ ಹೊರತು ವಾಸ್ತವಿಕ ಸತ್ಯ ಅಲ್ಲ.

ಹೀಗೆ ಕನಕದಾಸರು ನಮಗೆ ನಾಲ್ವರಿಗೆ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ರೂಪಗಳಲ್ಲಿ ಕಾಣಿಸಿಕೊಂಡ ಶಿವಗಂಗೆ ಬೆಟ್ಟ! ಆದರೆ ಈ ನಾಲ್ವರನ್ನೂ ಬಿಟ್ಟದ್ದು 'ಕನಕಶಿಖರಿ' ಎಂಬುದು ಅಂತ್ಯದಲ್ಲಿ ಉಳಿಯುವ ಸತ್ಯ. ಬತ್ತ ಮತ್ತು ರಾಗಿಯರ ವಾದ ಮೇಲು ನೋಟಕ್ಕೆ ಮತೀಯ ಸಂಘರ್ಷ ಅಥವಾ ದಲಿತ ಧೋರಣೆಯಾಗಿ

ಕಂಡರೂ ಕನಕದಾಸರಂತಹ ಸಂತ ಶ್ರೇಷ್ಠರಲ್ಲಿ, ಆ ಸಮಷ್ಟಿ ಚೈತನ್ಯದಲ್ಲಿ ವ್ಯಷ್ಟಿಗತ ಅಲ್ಪತ್ವ ಇದ್ದಿರಲಾರದು ಎಂಬುದು ನನ್ನ ಅನಿಸಿಕೆ. ಅವರಿಗೆ ವ್ಯಾಸರಾಯರು, ಪುರಂದರದಾಸರು, ತಾತಾಚಾರ್ಯರು, ಆನಂದ ತೀರ್ಥರು, ವಾದಿರಾಜರು, ವಿಜಯೇಂದ್ರರು– ಇವರೆಲ್ಲರೂ ಪರಮ ಪೂಜ್ಯರು. ಅವರ ಬಗೆಗೆ ಅನನ್ಯಭಕ್ತಿ ಕನಕದಾಸರಿಗೆ. ಅವರೇ ಅವರ ಶಿಕ್ಷಾಗುರುಗಳು, ದೀಕ್ಷಾಗುರುಗಳು ಮತ್ತು ಮೋಕ್ಷ ಗುರುಗಳು. ಅವರ ಬಗೆಗೆ ಅಪಚಾರದ ಅಥವಾ ನಿಂದನೆಯ ನುಡಿ ನುಡಿದಿರ ಲಾರರು. ಅಂತೆಯೇ ಕನಕದಾಸರೇ ರಚಿಸಿದ ಹರಿಭಕ್ತಿಸಾರ, ನಳಚರಿತ್ರೆ, ಮೋಹನ ತರಂಗಿಣಿ, ಕೀರ್ತನೆಗಳು– ಎಲ್ಲ ಕೃತಿಗಳಲ್ಲೂ ಬ್ರಾಹ್ಮಣರನ್ನು ಭಕ್ತಿಯಿಂದಲೇ ಕಂಡು ಗೌರವಿಸಿದ್ದಾರೆ. ಅಷ್ಟೇಕೆ ವಾದಗ್ರಸ್ತ ಕೃತಿಯಾದ ರಾಮಧಾನ್ಯ ಚರಿತ್ರೆಯಲ್ಲೂ ಬ್ರಾಹ್ಮಣರನ್ನು ಭೂಸುರವರರೆಂದೇ ಸಂಬೋಧಿಸಿ ಮಾನ್ಯ ಮಾಡಿದ್ದಾರೆ. ಅಂದ ಮೇಲೆ ಬ್ರಾಹ್ಮಣ ಅಥವಾ ಬ್ರಾಹ್ಮಣ್ಯದ ಖಂಡನೆ ಕನಕದಾಸರಿಂದ ಬಹುದೂರ ಉಳಿಯಿತು. ದಲಿತ ಅಥವಾ ಬಂಡಾಯದ ಅರ್ಥ ಕನಕದಾಸರ ಕನಸಿನಲ್ಲೂ ಸುಳಿದಿರಲಿಕ್ಕಿಲ್ಲ. ಅಂದರೆ ನೋವನ್ನನುಭವಿಸಿ ಕಿಂಡಿಯ ಮೂಲಕವಾದರೂ ಅಖಂಡನನ್ನು ದರ್ಶಿಸುವುದು ಗೊತ್ತಿತ್ತೇ ಹೊರತು ಯಾರನ್ನೂ, ಯಾವುದನ್ನೂ ಪ್ರತಿಭಟಿಸುವ ಇಲ್ಲವೇ ಭರ್ತ್ಸನೆಗೈಯುವ ಮನೋಧರ್ಮ ಅವರದ್ದಾಗಿರಲಿಲ್ಲ. ಅಷ್ಟೇ ಅಲ್ಲ, ಅನ್ಯಾಯದ ಬಗ್ಗೆ ಸಾತ್ವಿಕ ವಿರೋಧವನ್ನೂ ಅವರಲ್ಲಿ ನಾವು ಕಾಣಲಾರೆವು. ಆದ್ದರಿಂದ ಬಂಡಾಯ ಭಾವನೆ ಅವರಲ್ಲಿ ಖಂಡಿತ ಮೂಡಿರ ಲಾರದು. ಸಿರಿತನದ ನಿಸ್ಸಾರವನ್ನೂ ಬಡತನದ ನಿಸ್ಸಂಗತ್ವವನ್ನೂ ಕಂಡುಕೊಂಡಿದ್ದ ಆ ಪೂರ್ಣಾನುಭವಿಗೆ ಹಣದ ಬಣ್ಣವೇ ಮರೆತು ಹೋಗಿತ್ತು ಎಂದ ಮೇಲೆ ಧನಿಕ ದರಿದ್ರ ಎಂಬ ಪ್ರಶ್ನೆ ಅವರನ್ನು ಕಾಡಿರಲಿಕ್ಕಿಲ್ಲ. ಸಮಸ್ತವೂ ಅವನ ಕರುಣಪ್ರಸಾದವೆಂದು ಭಾವಿಸಿದ್ದ ಸಮದರ್ಶಿಯ ಬಳಿಗೆ ಭಾಷೆ ಬಂದು ತನ್ನ ಸಮಸ್ಯೆಗೆ ಪರಿಹಾರವನ್ನು ಬೇಡಿರಲಿಕ್ಕಿಲ್ಲ. ಆ ಕಾರಣ ಸಂತಕವಿ, ಭಕ್ತಕವಿ, ದಿವ್ಯದ್ರಷ್ಟಾರ, ದಾರ್ಶನಿಕ, ಅನುಭಾವಿ, ಅಪರೋಕ್ಷ ಜ್ಞಾನಿ, ಆದಿಕೇಶವನ ಅವಿಚ್ಛಿನ್ನ ಭಕ್ತ, ವಿಶ್ವಮಾನವ ಕನಕದಾಸ ಇವೆಲ್ಲವುಗಳಿಗೂ ಅತೀತನಾದವನು. ಅನ್ಯಾದೃಶ, ಅಮೇಯ ವ್ಯಕ್ತಿ–ಶಕ್ತಿ ಆತ. ಅವನು ತನ್ನ ಮನೋವಲಯದಲ್ಲಿ ಪುಟಿದೆದ್ದ ಭಕ್ತಿಯ ಕಾರಂಜಿಗೆ ರಾಮಧಾನ್ಯ ಚರಿತ್ರೆ ಎಂಬ ಒಂದು ಪ್ರಣಾಳಿಯನ್ನು ನಿರ್ಮಿಸಿದ್ದಾನೆ ಎಂದು ಹೇಳಬಹುದು.

ಇಷ್ಟಾದರೂ ರಾಮಧಾನ್ಯ ಚರಿತ್ರೆಯ ಅಸ್ತಿತ್ವ ಅಡಗಿರುವುದು ಅದರಲ್ಲಿದೆ ಎನ್ನಲಾದ ಮತೀಯ ವಿಡಂಬನೆಯಲ್ಲಲ್ಲ, ಬಂಡಾಯ ಪ್ರಜ್ಞೆಯಿಂದಲ್ಲ, ಭಾಷೆಯ ಶ್ಲೇಷೆಯಿಂದಲ್ಲ ಅಥವಾ ಬೃಹತ್ ರಾಮಾಯಣ ಸಂಗ್ರಹಗೊಂಡಿದೆ ಎಂಬುದ ರಿಂದಲೂ ಅಲ್ಲ, ಅದರಲ್ಲಿ ಎದ್ದು ಕಾಣುವ ಸಂಭಾಷಣೆಯ ಶ್ರೀಮಂತಿಕೆಯಲ್ಲಿ;

ಅಲ್ಲಿನ ನಾಟಕೀಯತೆಯಲ್ಲಿರುವ ಗಂಡುಗುಣದಲ್ಲಿ. ಆದರೆ ಒಂದು ಮಾತು: ಕನಕದಾಸರು ಪಂಪನಂತೆ ಭಾಷಣಕಾರರು; ರನ್ನನಂತೆ ಅಥವಾ ರಾಘವಾಂಕನಂತೆ ಮಾತಿನ ಚಕಮಕಿಯ ಕಿಡಿಕಾರಿಸುವವರಲ್ಲ. ಅವರ ಗ್ರಾಮೀಣ ಸೊಗಡು ತುಂಬಿದ ಬನಿಯುಳ್ಳ ಭಾಷೆ, ಅವರ ವಸ್ತುವಿನ್ಯಾಸದ ವಿಶಿಷ್ಟತೆಗೆ ಸಮಸ್ಪರ್ಧಿಯಾಗಿ ನಿಂತಿದೆ ಎನ್ನಬಹುದು.

ಗೌತಮ ಮಹಾಮುನಿಯು ಶ್ರೀರಾಮನಿಗೆ 'ನಮ್ಮಯ ದೇಶಕತಿಶಯ ನರೆದಲೆಗನೇ ವಾಸಿ' ಎಂದ ಕೂಡಲೇ ಸಿಡಿದೆದ್ದ ವ್ರೀಹಿ, 'ಎಲ್ಲ ಧರ್ಮದ ಸಾರವನ್ನೂ ಬಲ್ಲ ನೀವು ಅಜ್ಞರಂತೆ ನುಡಿವುದು ಉಚಿತವಲ್ಲ. ನೆಲ್ಲು ನಾನಿರೆ, ಗೋದಿ ಮೊದಲಾದೆಲ್ಲ ಧಾನ್ಯಗಳಿರಲು ಇದರಲಿ ಬಲ್ಲಿದನು ನರೆದಲೆಗನೆಂಬುದಿದಾವ ಮತ?' ಎಂದು ದಟ್ಟಿಸಿ ನುಡಿಯುತ್ತಾನೆ. ಅನಂತರ ನರೆದಲೆಗನನ್ನು ತರಾಟೆಗೆ ತೆಗೆದು ಕೊಳ್ಳುತ್ತಾನೆ:

'ಏನೆಲೆವೊ ನರೆದಲೆಗ ನೀನು ಸಮಾನನೇ ಎನಗೆ ? ಕುಲಹೀನ, ಮತಿಹೀನ, ಬುಧರು ಜರೆದು ನಿರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ ! ಬಾಹಿರ, ನಡೆ ಸಾಕು ನೀನಾವ ಮಾನ್ಯನು' ಎಂದು ಜರೆದು ಜಂಕಿಸಿ ನುಡಿದು, ಮುಂದೆ ತನ್ನ ಮಹಿಮೆಯನ್ನು ಕೊಚ್ಚಿಕೊಳ್ಳುತ್ತಾನೆ:

'ಕ್ಷಿತಿಯುಮರರುಪನಯನದಲಿ, ಸುವ್ರತ, ಸುಭೋಜನ, ಪರಮ ಮಂತ್ರಾಕ್ಷತೆಗಳಲಿ, ಶುಭಶೋಭನದಲಾರತಿಯಲಿ, ಕ್ರತುಗಳೆಡೆಯಲಿ, ಅರಮನೆಯಲಿ ಪ್ರತಿದಿನವು ರಂಜಿಸುತ ದೇವರಿಗತಿಶಯದ ನೈವೇದ್ಯದಲಿ, ಬ್ರಹ್ಮರ ಸಮಾರಾಧನೆಯಲಿ, ವಿದ್ಯಾರಂಭ ಕಾಲದಲಿ, ಹರಿದಿವಸದೌಪಾಸನೆಗಳಲಿ, ಹೊಸಮನೆಯ ಪುಣ್ಯಾರ್ಚನೆಯಲಿ, ಮದುಮಕ್ಕಳಿಗೆ ಸೇಸೆಯಿಡುವೆಡೆಯಲ್ಲಿ, ಗಂಧಾಕ್ಷತೆಯಿಂದೆಸೆವ ವಿಪ್ರರ ಫಾಲದಲಿ ನಾನು ಮೆರೆಯುತ್ತೇನೆ. ಅಲ್ಲದೆ, ಪರಿಮಳದ ಚಂದನದ ತರುವಿಗೆ ಸರಿಯೆ ಒಣಗಿದ ಕಾಷ್ಠ ? ಗೋವದು ಕರೆದ ಹಾಲಿಗೆ ಕುರಿಯ ಹಾಲಂತರವೆ ? ಪರಮ ಸಾಹಸಿ ವೀರ ಹನುಮಗೆ ಮರದ ಮೇಲಣ ಕಪಿಯು ಸಮನೇ ? ಸುರನದಿಗೆ ಕಾಡಹಳ್ಳ ಸರಿಯೆ ? ಗರುಡನ ಮರಿಗೆ ಹದ್ದಂತರವೆ ? ಹಂಸೆಗೆ ಬಕನು ಹೋಲುವುದೆ ? ಮರಿಕೋಗಿಲೆಗೆ ವಾಯಸ ಜೋಡಿಯೆ ? ನರೆದಲೆಗ ಸಾಕಿನ್ನು ನೀನಾವ ಮಾನ್ಯನು ?'

ವ್ರೀಹಿಯ ಭಾಷಣದ ನಂತರ ನರೆದಲೆಗನ ಸರದಿ. ಸಭಾಮಧ್ಯದಲ್ಲಿ ಎದ್ದು ನಿಂತ ನರೆದಲೆಗ ತನ್ನ ಮಾತಿನ ಬಾಣಗಳನ್ನು ಪುಂಖಾನುಪುಂಖವಾಗಿ ಬಿಟ್ಟ.

'ನುಡಿಗೆ ಹೇಸದ ಭಂಡ ನಿನ್ನೊಳು ಕೊಡುವುದೇ ಮಾರುತ್ತರವ ! ಕಡು ಜಡನಲಾ, ಸತ್ಯಹೀನನು ನೀನು. ಬಡವರ ಕಣ್ಣೆತ್ತಿ ನೋಡೆ. ಧನಾಢ್ಯರನು ಬೆಂಬತ್ತಿ ನಡೆವುದಪೇಕ್ಷೆ ನಿನ್ನದು; ಬಾಣಂತಿಯರಿಗೆ ರೋಗಿಗೆ ಪಥ್ಯ ನೀನಹೆ. ಹೆಣದ

ಬಾಯಿಗೆ ತುತ್ತು. ಇಂಥವನಾದ ನಿನ್ನ ಜನ್ಮ ನಿರರ್ಥಕ. ಸತ್ತದಿನದಾರಭ್ಯ ಮನುಜರು ಕರ್ಮವ ಹೊತ್ತು ಪಿಂಡವನಿತ್ತು ತಪ್ಪದೆ ಮತ್ತೆ ವಾಯಸಕುಲವ ಕರೆಕರೆದು ತುತ್ತನಿಡುವರು. ಎಳ್ಳು ದರ್ಭೆಗೆ ತೆತ್ತಿಗನು ನೀನು. ಮಳೆದೆಗೆದು ಬೆಳೆಯಡಗಿ ಕ್ಷಾಮದ ವಿಳಯ ಕಾಲದೊಳನ್ನವಿಲ್ಲದೆ ಅಳಿವ ಪ್ರಾಣಿಗಳನಾದರಿಸಿ ಸಲಹಿದವನು ನಾನು, ನೀನಲ್ಲ. ಬಡವ ಬಲ್ಲಿದ ಎಂಬ ಪಕ್ಷಪಾತ ನಿನ್ನಲ್ಲಿದೆ, ನನ್ನಲಿಲ್ಲ; ನಾನು ಸಮದರ್ಶಿ. ನೀನು ಸತ್ತವರ ಪ್ರತಿಬಿಂಬ ರೂಪನಿದ್ದೀಯೆ. ಹೆಚ್ಚೇನು ನಪುಂಸಕನಾದ ನಿನ್ನೊಡನೆ ವಾದ ಮಾಡುವುದೇ ಉಚಿತವಲ್ಲ.'

ಇತ್ತಂಡದಲ್ಲೂ ವಿದ್ವೇಷ ಹೆಚ್ಚಿ, ಪರಿಸ್ಥಿತಿ ವಿಕೋಪಕ್ಕೆ ಹೋಗುವುದನ್ನು ಕಂಡು ಶ್ರೀರಾಮನು ಇಬ್ಬರನ್ನೂ ಸೆರೆಯಲ್ಲಿಡುವಂತೆ ಆಜ್ಞೆ ಮಾಡುತ್ತಾನೆ. ಏಳು ತಿಂಗಳ ಸೆರೆಮನೆ ವಾಸದ ಅನಂತರದಲ್ಲಿ ಸಾರ್ವಭೌಮ ಶ್ರೀರಾಮನು ಅಯೋಧ್ಯೆಗೆ ಕರೆಸಿ, ಇಬ್ಬರನ್ನೂ ವಿಚಾರಣೆಗೆ ಒಳಗು ಮಾಡಿದಾಗ ಸಾರ ಹೃದಯದ ನರೆದಲೆಗ ಗಟ್ಟಿಯಾಗಿದ್ದ, ಆದರೆ ನಿಸ್ಸಾರಗೊಂಡ ವ್ರೀಹಿ ಕಾಂತಿಹೀನನಾಗಿ ಕರಗಿಹೋಗಿದ್ದ. ನರೆದಲೆಗನ ಗಟ್ಟಿತನವನ್ನು ಕಂಡ ರಾಘವನು ಅವನಿಗೆ ತನ್ನ ಹೆಸರಿಟ್ಟ. ಅಂದಿನಿಂದ ನರೆದಲೆಗನಿಗೆ 'ರಾಗಿ' ಎಂದು ಹೆಸರಾಯಿತು !

ವಸ್ತು ವಿನ್ಯಾಸ ಕುರಿತ ಕವಿಯ ಚಮತ್ಕೃತಿ ಏನೇ ಇರಲಿ, ಕಸುವುಳ್ಳ ಮಾತಿನ ವಾದದಿಂದಾಗಿ ಕೃತಿಯ ಸಮಗ್ರಶಿಲ್ಪಕ್ಕೊಂದು ಮೆರಗು ಬಂದಿದೆ ಎಂದು ಹೇಳಬಹುದು.

ಹೆಸರೇ ಸೂಚಿಸುವಂತೆ ಹರಿಭಕ್ತಿಸಾರ ಹರಿನಾಮ ಸಂಕೀರ್ತನೆಯ ತುಳಸೀಹಾರ ! ವಿಷ್ಣು ಪಾರಮ್ಯದ ಪುಣ್ಯಕೃತಿ ! ಭಕ್ತಿಯೆ ಭಾಗೀರಥಿಯಾಗಿ ಕನ್ನಡಕ್ಕೊದಗಿಬಂದ ತೀರ್ಥಸಾಹಿತ್ಯ ! ಜಗನ್ನಾಟಕ ಸೂತ್ರಧಾರಿಯಾದ ಶ್ರೀಹರಿಯ ದಶಾವತಾರಗಳ ನೆನಹಿನ ಹಿನ್ನೆಲೆಯಲ್ಲಿ ಅವನ ಕುರಿತ ಪ್ರಾಂಜಲ ಮನದ ಪರಿಶುದ್ಧ ಭಾವನೆಯ ಭಕ್ತಿ ಓತಪ್ರೋತವಾಗಿ ಹರಿದಿದೆ ಇಲ್ಲಿ. ಪ್ರತಿ ಪದ್ಯವೂ ಮುಕ್ತಾಯವಾಗುವ 'ರಕ್ಷಿಸು ನಮ್ಮನನವರತ' ಎಂಬ ಬೇಡಿಕೆ ಭಕ್ತಿಭಾವದ ಅನನ್ಯತೆಯ ಪ್ರತೀಕ.

**ಗತಿವಿಹೀನರಿಗಾರು ನೀನೆ**
**ಗತಿ ಕಣಾ ಪತಿಕರಿಸಿಕೊಡು ಸ**
**ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ**
**ಶ್ರುತಿ ವಚನವಾಡುವುದು ಶರಣಾ**
**ಗತರ ಸೇವಕನೆಂದು ನಿನ್ನನು**
**ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ.**

ಇಲ್ಲಿ ಅಭಿವ್ಯಕ್ತವಾಗುವ ಭಕ್ತಕವಿಯ ಆರ್ತತೆ ಅನನ್ಯ ಶರಣತೆ ಮತ್ತು

ನೈಷ್ಠಿಕ ಭಕ್ತಿಯ ಅನುಮೋದನೆ ನಿಜಕ್ಕೂ ಶ್ಲಾಘನೀಯ. ಇಲ್ಲಿನ ಎಲ್ಲ ಭಾಮಿನಿ ಗಳಲ್ಲೂ ಭಕ್ತಿ ರಸ ತುಂಬಿ ತುಳುಕಿರುವುದು ಕಂಡುಬರುತ್ತದೆ.

ಈ ಬಗೆಯ ವೈಷ್ಣವ ಭಕ್ತಿಯ ವೈಭವದ ಜೊತೆಯಲ್ಲಿ ಕಾವ್ಯ ವೈಖರಿಯು ತೆಕ್ಕೆ ಬಿದ್ದಿರುವುದು ಕಂಡು ಬರುತ್ತದೆ. 'ದೀನ ನಾನು ಸಮಸ್ತ ಲೋಕಕೆ ದಾನಿ ನೀನು ವಿಚಾರಿಸಲು ಮತಿ ಹೀನ ನಾನು ಮಹಾಮಹಿಮ ಕೈವಲ್ಯ ಪತಿ ನೀನು; ಏನು ಬಲ್ಲೆನೊ ನಾನು ನೆರೆ ಸುಜ್ಞಾನ ಮೂರುತಿ ನೀನು' ಎಂಬ ಅಣು–ಘನಗಳ ವಿಶ್ಲೇಷಣೆಯಲ್ಲಿ, 'ವರುಷ ನೂರಾಯುಷ್ಯ ಅದರೊಳಗೆ ಇರುಳು ಕಳೆದೈವತ್ತು, ಐವತ್ತರಲಿ ವಾರ್ಧಿಕ, ಬಾಲ್ಯ, ಕೌಮಾರದಲಿ ಮೂವತ್ತು ಇರದೆ ಸಂದುದು ಬಳಿಕ ಇಪ್ಪತ್ತು ವರುಷ' ಎಂಬ ಆಯುಮಾನದ ಶೇಷ ನಿಷ್ಕರ್ಷೆಯಲ್ಲಿ, 'ಎಂಜಲೆಂಜಲು ಎಂಬರಾ ನುಡಿ ಎಂಜಲಲ್ಲವೆ' ಎಂಬ ಸಾರಳ್ಯದಲ್ಲಿ, 'ಸತ್ತವರಿಗಳಲೇಕೆ ತನ್ನನು ಹೆತ್ತವರು ಹೊತ್ತವರುಗಳು ತಾವ್ ಸತ್ತು ಹೋಗುವರಲ್ಲದುಳಿವರೆ' ಎಂಬ ಕಟುಸತ್ಯ ಘೋಷಣೆಯಲ್ಲಿ, 'ಹಸಿವರಿತು ತಾಯ್ ತನ್ನ ಶಿಶುವಿಗೆ ಒಸೆದು ಮೊಲೆ ಕೊಡುವಂತೆ', 'ಗಿಳಿಯ ಮರಿಯನು ತಂದು ಪಂಜರದೊಳಗೆ ಪೋಷಿಸಿ ಕಲಿಸಿ ಮೃದು ನುಡಿಗಳನು ಲಾಲಿಸಿ ಕೇಳ್ವ ಪರಿಣತರಂತೆ, – ಇವೇ ಮೊದಲಾದ ಔಚಿತ್ಯಪೂರ್ಣ ಉಪಮೆಗಳ ಅಳವಡಿಕೆಯಲ್ಲಿ, 'ಎಂಟು ಗೇಣಿನ ದೇಹ ರೋಮುಗಳೆಂಟು ಕೋಟಿಯು ಕೀಲ್ಗಳರವತ್ತೆಂಟು ಮಾಂಸಗಳಿಂದ ಮಾಡಿದ ಮನೆಯ' ಎಂಬ ನೈಜ ರೂಪಕ ಅಥವಾ ಕಾವ್ಯಪ್ರತಿಮೆಯ ನಿರ್ಮಾಣದೆಡೆಯಲ್ಲಿ, 'ತಾಮರಸದಳ ನಯನ ಭಾರ್ಗವ ರಾಮ ಹಲಧರರಾಮ ದಶರಥ ರಾಮ ಮೇಘ ಶ್ಯಾಮ ಸದ್ಗುಣಧಾಮ ನಿಸ್ಸೀಮ' ಎಂಬಲ್ಲಿನ ಪ್ರಾಸಾನುಪ್ರಾಸಯುಕ್ತ ನಾದಲೋಲುಪತೆಯಲ್ಲಿ ಪ್ರತಿ ಪದ್ಯದಲ್ಲೂ ಅಭಿವ್ಯಕ್ತಗೊಳ್ಳುವ ಭಕ್ತಿ ಸ್ಪಷ್ಟತೆಯಲ್ಲಿ ಅದಕ್ಕನುಗುಣವಾದ ಶೈಲಿಯ ಸೊಬಗು ಸೌಂದರ್ಯದಲ್ಲಿ ಭಾವ ಮಾಧುರ್ಯದಲ್ಲಿ ಭಾಷೆಯ ಬಂಧುರತೆಯಲ್ಲಿ ಭಾಮಿನಿಯ ಓಘ ವೈಭವಗಳಲ್ಲಿ ಕವಿ ಕನಕದಾಸರ ಕಮನೀಯ ಕಾವ್ಯಗುಣ ಎದ್ದು ಕಾಣುತ್ತದೆ.

ಶಿಷ್ಟ ಸಾಹಿತ್ಯದ ಸೃಷ್ಟಿಗೆ ಜನಪದವೇ ಮಾತೃಗರ್ಭ ನಳನ ಕಥೆ ಇದಕ್ಕೆ ಅಪವಾದವಾಗಿಲ್ಲ. ಅದರ ತಾಯಿಬೇರಿರುವುದು ಜಾನಪದದಲ್ಲಿಯೇ. ಪ್ರಾಚೀನ ಯುಗದ ಚಾರಣ ಗೀತೆ ಅರ್ವಾಚೀನದಲ್ಲಿ ಕಾವ್ಯ ಮಹಾಕಾವ್ಯ ಆದಂತೆ ನಳನ ಕಥೆ ಒಂದು ಖಂಡಕಾವ್ಯವಾಗಿ ರೂಪುಗೊಂಡಿದೆ. ವ್ಯಾಸಮುನಿ ತನ್ನ ಮಹಾಕಾವ್ಯಕ್ಕೊಂದು ಆಯಾಮ ಒದಗಿಸಲು ನಳ, ಹರಿಶ್ಚಂದ್ರ ಮೊದಲಾದ ಕಥಾನಕಗಳನ್ನು ಜನಪದದಿಂದಲೇ ಆಯ್ದುಕೊಂಡಿದ್ದಾನೆ, ಉಪಾಖ್ಯಾನಗಳಾಗಿ ರೂಪಿಸಿ ಅಳವಡಿಸಿದ್ದಾನೆ. ಹರಿಶ್ಚಂದ್ರ ಸತ್ಯಕ್ಕೆ ಸಂಕೇತವಾದರೆ, ನಳ ಆದರ್ಶ ಪ್ರೇಮದ ಪ್ರತೀಕವಾಗಿದ್ದಾನೆ. ಜಾನಪದೀಯವೂ ಜನಪ್ರಿಯವೂ ಆದ ನಳನ ಕಥೆ

ವೇದ ಬ್ರಾಹ್ಮಣ ಆರಣ್ಯಕ ಇತಿಹಾಸಗಳಿಗಿಂತಲೂ ಪ್ರಾಚೀನತಮವಾದುದು. ರಾಮಾಯಣದಲ್ಲಿ ಪ್ರಾಸಂಗಿಕವಾಗಿ ಒಂದೆಡೆ, ನಳ ದಮಯಂತೀವ ಎಂಬ ಉಲ್ಲೇಖ ದೊರೆತರೆ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತೆಂಟು ಅಧ್ಯಾಯಗಳಷ್ಟು ವ್ಯಾಪ್ತಿಯುಳ್ಳ ಒಂದು ಕಾವ್ಯ ಕಾಸಾರವೇ ಆಗಿ ರೂಪುಗೊಂಡಿದೆ. ವ್ಯಾಸರ ಅನಂತರದಲ್ಲಿ ಇದು ಅನೇಕ ಕವಿ ನಾಟಕಕಾರರಿಗೆ ಆಕರವಾಯಿತು. ಮುಂದಿನವರು ಕರ್ಮನಿಷ್ಠೆಯ, ಕಷ್ಟಸಹಿಷ್ಣುತೆಯ ನೀತಿಬೋಧಕ ಕತೆಯಾಗಿ, ಇಲ್ಲವೇ ದೈವ ಎನ್ನುವುದು ಒಂದು ಅಪ್ರತಿಹತ ಶಕ್ತಿ ಎಂದು ಸಾರುವ ವಿಧಿವಾದ ಪ್ರತಿಪಾದಕ ಕಾವ್ಯವಾಗಿ ಇಲ್ಲವೆ ಅಳಿಕಾಮ ಕರಗಿ ಪರಿಶುದ್ಧ ಪ್ರೇಮವಾಗಿ ಪರಿಣಮಿಸಿದ ಪುಣ್ಯ ವಸ್ತುವಾಗಿ ಮಾರ್ಪಡಿಸಿ ರೂಪಿಸಿಕೊಂಡರು. ಸಂಸ್ಕೃತದ ಪಂಚ ಮಹಾ ಕಾವ್ಯಗಳಲ್ಲಿ ಒಂದಾದ ನೈಷಧಂ ವಿದ್ವದೌಷಧಂ ಎಂಬ ಭಾವನಾ ವಿಮರ್ಶೆಗೆ ಪಾತ್ರವಾದ ಶ್ರೀಹರ್ಷನ ನೈಷಧೀಯ ಚರಿತ, ತ್ರಿವಿಕ್ರಮ ಭಟ್ಟನ 'ನಳಚಂಪು', ವಾಮನಭಟ್ಟನ 'ನಳಾಭ್ಯುದಯ' ಮೊದಲಾದ ಕಾವ್ಯಗಳು, ಆರ್ಯಕ್ಷೇಮೇಂದ್ರನ 'ನೈಷಧಾನಂದ', ರಾಮಚಂದ್ರ ಸೂರಿಯ ನಳವಿಲಾಸ; ನೀಲಕಂಠ ದೀಕ್ಷಿತನ ನಳಚರಿತ, ವೆಂಕಟಾರ್ಯನ ಭೈಮೀ ಪರಿಣಯ' ಮೊದಲಾದ ನಾಟಕಗಳು ಪ್ರಸಿದ್ಧವಾಗಿವೆ. ಕನ್ನಡದಲ್ಲಿ ಸುಮಾರು ಹದಿಮೂರನೆಯ ಶತಮಾನದವನೆನ್ನಲಾದ ಚೌಂಡರಸನ ನಳಚಂಪು ಉಪಲಬ್ಧವಿರುವ ಮೊತ್ತ ಮೊದಲ ನಳನೃಪಕಾವ್ಯ. ಕುಮಾರವ್ಯಾಸ ಭಾರತದಲ್ಲಿ ಕ್ವಚಿತ್ತಾಗಿ, ಯಕ್ಷಗಾನ–ಬಯಲಾಟಗಳಲ್ಲಿ ಬೃಹತ್ತಾಗಿ ಬೆಳೆದು ನಿಂತಿದೆ. ಇವರೆಲ್ಲರ ಕೃತಿಗಳ ವಸ್ತು ಹೆಚ್ಚು ಕಡಿಮೆ ಪವಿತ್ರಪ್ರೇಮ ಮತ್ತು ಪಾತಿವ್ರತ್ಯ ಮಹಿಮೆ ಆಗಿದೆ. ಅದಕ್ಕೂ ಹೆಚ್ಚಾಗಿ ವಿಧಿವಾದವನ್ನು ವೈಭವೀಕರಿಸುವುದು. ಆದರೆ, ಈ ಬಗ್ಗೆ ನಳವಿಲಾಸ ನಾಟಕದ ಕರ್ತೃ ರಾಮಚಂದ್ರ ಸೂರಿ ಮಾತ್ರ ಅಪವಾದವಾಗಿದ್ದಾನೆ. ಅವನು ದೈವಶಕ್ತಿಗೆ ಬದಲಾಗಿ ಮಾನವಶಕ್ತಿಯನ್ನು ಬಳಸಿ ಕೊಂಡಿದ್ದಾನೆ. ಕಲಿಪುರುಷನ ಬದಲು ನಾಟಕದಲ್ಲಿ ಚಿತ್ರಸೇನನೆಂಬ ಮಾನವ ಪಾತ್ರವನ್ನು ತಂದು ಒಂದು ಹೊಸ ತಿರುವು ಕೊಟ್ಟಿದ್ದಾನೆ.

ವ್ಯಾಸ ಭಾರತಕ್ಕೂ ಸೂರಿಯ ನಲವಿಲಾಸಕ್ಕೂ ಇನ್ನೂ ಕೆಲವು ವ್ಯತ್ಯಾಸಗಳಿವೆ. ಮಹಾಭಾರತದಲ್ಲಿ ನಲನ ತಂದೆಯ ಹೆಸರು ವೀರಸೇನ, ನಳವಿಲಾಸದಲ್ಲಿ ನಿಷಧ ಎಂದು; ಅಲ್ಲಿ ನಳನ ಸಹೋದರ ಪುಷ್ಕರ, ಇಲ್ಲಿ ಕೂಬರ; ಅಲ್ಲಿ ತಮ್ಮನಾದ ಪುಷ್ಕರ ಪ್ರತಿನಾಯಕ, ಇಲ್ಲಿ ದಮಯಂತಿಯನ್ನು ಅಭಿಲಕ್ಷಿಸುವ ಚೇದಿರಾಜ (ಕಲಚುರಿಪತಿ) ಚಿತ್ರಸೇನ; ಅಲ್ಲಿ ದಮಯಂತಿಯ ಹೆಸರು ಬರುವುದಿಲ್ಲ, ಇಲ್ಲಿ ಪುಷ್ಪವತಿ ಎಂದಿದೆ; ಅಲ್ಲಿ ನಳದಮಯಂತಿಯರ ಪರಸ್ಪರಾನುರಾಗಕ್ಕೆ ಹಂಸಪಕ್ಷಿ ನಿಮಿತ್ತ ಮತ್ತು ಅದರದೇ ದೌತ್ಯ, ಇಲ್ಲಿ ಕಲಹಂಸನೆಂಬ ನೇಹಿಗ ಕಾರಣ; ಅಲ್ಲಿ ಲೋಕಪಾಲಕರಿಂದಾದ ನಲದೌತ್ಯವಿದ್ದರೆ, ಇಲ್ಲಿ ಅದರ ಸುಳಿವೇ ಇಲ್ಲ; ಅಲ್ಲಿ

ನಲನ ರೂಪವಿಕಾರಕ್ಕೆ ಕಾರ್ಕೋಟಕನು ನೇರ ಕಾರಣನಾದರೆ, ಇಲ್ಲಿ ಸರ್ಪ ರೂಪದಲ್ಲಿ ಬಂದ ನಳನ ತಂದೆ ಕಾರಣ; ರೂಪವಿಕಾರದ ಅನಂತರ ಬಾಹುಕ ಎಂಬ ಹೆಸರು ಉಭಯು ಸಾಮಾನ್ಯ; ಅಲ್ಲಿನ ಋತುಪರ್ಣ, ಇಲ್ಲಿ ದಧಿಪರ್ಣನೆನಿಸಿದ್ದಾನೆ; ನಳ ವಿಯೋಗದನಂತರ ದಮಯಂತಿಯು ಚೇದಿರಾಜ ಸುಬಾಹುವಿನ ಗೃಹದಲ್ಲಿ ಆಶ್ರಯ ಹೊಂದಿದಳೆಂದು ಅಲ್ಲಿ ಬಂದರೆ, ಇಲ್ಲಿ ಋತುಪರ್ಣನ ಸಮೀಪದಲ್ಲಿ ಎಂದು ಬರೆದಿದೆ; ನೂರು ಯೋಜನ ದೂರವನ್ನು ಅತಿಶೀಘ್ರವಾಗಿ ಕ್ರಮಸುವುದು ನಳನ ಅಶ್ವವಿದ್ಯೆಯ ಪ್ರಭಾವದಿಂದ ಎಂದು ಅಲ್ಲಿದ್ದರೆ, ಇಲ್ಲಿ ವೇಗದಲ್ಲಿ ಗಾಳಿಯನ್ನೂ ಗೆಲ್ಲಬಲ್ಲ ಕುದುರೆಗಳ ದಿವ್ಯ ತೇಜಸ್ಸಿನ ಪ್ರಭಾವದಿಂದ ಎಂದಿದೆ; ಅಲ್ಲಿ ನಳ ಮತ್ತು ಋತುಪರ್ಣರು ಕುಂಡಿನಪುರನನ್ನು ಸಾಯಂಕಾಲ ಪ್ರವೇಶಿಸಿದರೆ, ಇಲ್ಲಿ ನಳ ಮತ್ತು ದಧಿಪರ್ಣರು ಪ್ರಾತಃಕಾಲ ಪ್ರವೇಶಿಸುತ್ತಾರೆ; ಅಲ್ಲಿ ನಳದಮಯಂತಿಯರ ಪುನಸ್ಸಮಾಗಮ ನಾಲ್ಕನೇ ವರ್ಷದಲ್ಲಾದರೆ, ಇಲ್ಲಿ ಹನ್ನೆರಡೇ ವರ್ಷದಲ್ಲಾಗುತ್ತದೆ; ಬಾಹುಕರೂಪಿ ನಳನು ಕಳುಹಿಸಿದ ಪಶುಮಾಂಸವನ್ನು ತಿಂದು ಅವನ ಕೈರುಚಿಯ ಅನುಭವವಿದ್ದ ಅಲ್ಲಿನ ದಮಯಂತಿಯು ನಳನನ್ನು ಗುರುತಿಸಿದರೆ, ದಧಿಪರ್ಣನ ಸೂಪಕಾರನ ಸೂರ್ಯಪಾಕ ಪ್ರಸಿದ್ಧಿಯನ್ನು ಕೇಳಿದ್ದ ಇಲ್ಲಿನ ದಮಯಂತಿಯು ಕಲಹಂಸನನ್ನು ಕಳುಹಿಸಿ, ಸ್ವಯಂವರ ಏರ್ಪಾಟಾಗಿದೆ ಎಂದು ಸುಳ್ಳು ಸುದ್ದಿ ಮುಟ್ಟಿಸಿ, ದಧಿಪರ್ಣನನ್ನು ಆಹ್ವಾನಿಸಿ, ನಳನನ್ನು ಆಕರ್ಷಿಸುತ್ತಾಳೆ ಮತ್ತು ನಳನ ಮರಣವಾರ್ತೆಯನ್ನು ಕೇಳಿ ದಮಯಂತಿಯು ಚಿತಾರೋಹಣಕ್ಕೆ ಸಿದ್ಧಳಾದಾಗ, ಕುಂಡಿನಪುರದ ಪರಿಸರಕ್ಕೆ ಬಂದಿದ್ದ ನಳನು ದಮಯಂತಿಯ ಪ್ರೇಮ ಪ್ರಕರ್ಷವನ್ನು ಕಂಡು, ತನ್ನ ಪಿತೃದೇವತೆಗಳನ್ನು ಸ್ಮರಿಸಿ, ಬಾಹುಕ ರೂಪವನ್ನು ತ್ಯಜಿಸಿ ನಿಜ ನಳನಾಗಿ ಪ್ರಕಟವಾಗುತ್ತಾನೆ.

ಇಂತಹ ಭಿನ್ನ ಬೆಳವಣಿಗೆಯ ಮೂಲಕ ಮೂಲವಸ್ತುವಿಗೆ ಹೊಸ ಚಾಲನೆ ಕೊಟ್ಟವನು ರಾಮಚಂದ್ರಸೂರಿ. ಅವನು ದೈವವಾದವನ್ನು ದೂರಮಾಡಿ, ಪುರುಷ ವಾದವನ್ನು ಎತ್ತಿ ಹಿಡಿದಿರುವುದು ವಸ್ತುವಿನ ನೈಜ ವಿನ್ಯಾಸಕ್ಕೆ ಮೆರಗು ಕೊಟ್ಟಿದೆ. ಇಲ್ಲಿನ ನಳನಾಗಲಿ, ಚಿತ್ರಸೇನನಾಗಲಿ ಮಾನವ ಸಹಜ ದೌರ್ಬಲ್ಯಗಳನ್ನುಳ್ಳವರು. ಜೂಜಾಡುವ ಚಾಪಲ್ಯದಿಂದ ಇಬ್ಬರೂ ಮುಕ್ತರಲ್ಲ. ಹೀಗೆ ಮಾನವ ಮಟ್ಟದಲ್ಲಿ ಪಾತ್ರಗಳನ್ನು ಮುಟ್ಟಿ ಮೆರೆಸಿದ ಕೀರ್ತಿ ರಾಮಚಂದ್ರ ಸೂರಿಗೆ ಸಲ್ಲುತ್ತದೆ.

ಕನಕದಾಸರ ನಳ ಚರಿತ್ರೆಗೆ ಕನ್ನಡದಲ್ಲಿ ಒಂದು ಗೌರವದ ಸ್ಥಾನ ಮೀಸಲಿದೆ. ಕೇವಲ ಒಂಬತ್ತು ಸಂಧಿಗಳುಳ್ಳ ಒಂದು ಖಂಡಕಾವ್ಯವಾದರೂ ಓದುಗನಿಗೆ ಮಹಾ ಕಾವ್ಯದಷ್ಟು ತೃಪ್ತಿಕೊಡುವ ಸತ್ವಶಾಲಿ ಕೃತಿಯಾಗಿದೆ. ಅದಕ್ಕೆ ಮೂಲಕಾರಣ ಕನಕದಾಸರ ಕಥೆಗಾರಿಕೆ, ಅವರ ಹೃದ್ಯಶೈಲಿ, ಭಾಮಿನಿಯ ಸುಭಗತೆ, ವರ್ಣನೆಗಳ ಸಹಜತೆ. ಕೆಲವೆಡೆಗಳಲ್ಲಿ ಕನಕದಾಸರು ವಾಗ್ಗೇಯಕಾರರೊ ಅಥವಾ ಕಾವ್ಯ ಪ್ರವಚನಕಾರರೊ

ಅಥವಾ ಹರಿಕಥೆದಾಸರೊ ಆಗಿಬಿಡುತ್ತಾರೆ. ಕಥೆಯನ್ನು ಪದೇ ಪದೇ ಹಾಡಿ ಹೇಳಿ ರೂಢಿಯಾಗಿರುವಂತೆ ನಿರರ್ಗಳವಾಗಿ ತಮ್ಮದೇ ಆದ ಧಾಟಿಯಲ್ಲಿ ನಿರೂಪಿಸಿಕೊಂಡು ಹೋಗುತ್ತಾರೆ. ಅದರಿಂದಾಗಿ ಅವರ ಅಭಿವ್ಯಕ್ತಿ ಜಾನಪದೀಯ ಸೊಗಡಿನಿಂದ ತುಂಬಿದೆ. ಕೃತಿ ಅವರ ನಿತ್ಯಾನುಷ್ಠಾನದ ಪುರಾಣ ಕಾವ್ಯವಾದ್ದರಿಂದ ಅದರ ಒಳ ತಿರುಳು ದೈವಭಕ್ತಿಯಾಗಿ ದೈವಶಕ್ತಿಯ ಪ್ರತಿಪಾದಕ ವಸ್ತುವಾಗಿ ಮೆರೆದಿದೆ. ವ್ಯಾಸರಿತ್ತ ಕಥಾ ವಸ್ತುವಿನ ವಿನ್ಯಾಸದಲ್ಲಿ ಹೆಚ್ಚು ಬದಲಾವಣೆ ಮಾಡಲು ಹೋಗಿಲ್ಲವಾದರೂ ಸಾಂದರ್ಭಿಕವಾಗಿ ತಮ್ಮ ಸ್ವೋಪಜ್ಞತೆಯನ್ನು ಮೆರೆಯದೆ ಬಿಟ್ಟಿಲ್ಲ. ಉದಾಹರಣೆಗೆ: ಹಂಸದರ್ಶನಕ್ಕೆ ಮುಂಚೆ ನಳನ ಬೇಂಟೆಯ ಬಣ್ಣನೆ ಬರುತ್ತದೆ. ಇಲ್ಲಿ ಬೇಂಟೆಗೆ ಹೋಗಲು ಒದಗಿದ ಸಂದರ್ಭವಂತೂ ತುಂಬಾ ಅರ್ಥಪೂರ್ಣವಾದದ್ದು. ವಿದರ್ಭದೇಶದ ಅರಸುಗುವರಿ ಭೈಮಿಯ ರೂಪಲಾವಣ್ಯಗಳ ಬಣ್ಣನೆಯನ್ನು ಬ್ರಾಹ್ಮಣೋತ್ತಮರಿಂದ ಕೇಳಿ ಮಾರುಹೋದ ನಳನ ಮನ ಅನ್ಯಕ್ಕೆಳಸದಿದ್ದಾಗ, ವಿಪ್ರಲಂಬದ ವಿರಹಾವಸ್ಥೆಯಲ್ಲಿದ್ದಾಗ ಆ ತಾಪಕ್ಕೆ ಕೊಟ್ಟ ತಿರುವಾಗಿ ಬರುತ್ತದೆ ಬೇಂಟೆ. ಬೇಂಟೆಯಿಂದ ಆಯಾಸಗೊಂಡ ನಳ ಬಹಿರುದ್ಯಾನದ ಕೊಳದ ತಡಿಯಲ್ಲಿ ವಿಶ್ರಾಂತಿಪಡೆವ ಸಂದರ್ಭದಲ್ಲಿ ರಾಜಹಂಸೆ ಕಾಣಿಸಿಕೊಳ್ಳುತ್ತದೆ. ಅಲ್ಲಿ ಹಂಸದೌತ್ಯದ ಸುಂದರ ಕಲ್ಪನೆ ಬಂದಿದೆ. ಇದೇ ರೀತಿ ದೇವೇಂದ್ರನ ಆಜ್ಞೆಯಂತೆ ದಮಯಂತಿಯ ಅಂತಃಪುರಕ್ಕೆ ಬಂದ ನಳನು ತಾನಾರೆಂಬುದನ್ನು ಮೊದಲು ತಿಳಿಸುವುದೇ ಇಲ್ಲ. ಅವಳು ಕೇಳಿದರೂ, 'ನಾನು ದೇವೇಂದ್ರನ ಕಡೆಯ ದೂತ; ಇಂದ್ರ, ಅಗ್ನಿ, ಯಮ, ವರುಣರಿಂದ ಆಜ್ಞಪ್ತನಾಗಿ ಬಂದಿದ್ದೇನೆ' ಎಂದಷ್ಟೇ ಹೇಳಿ, ಆ ನಾಲ್ವರಲ್ಲಿ ಅವಳು ಯಾರನ್ನಾದರೂ ಒಲಿಯಬೇಕೆಂದು ಒತ್ತಾಯಿಸುತ್ತಾನೆ. ಆಗ ಸಿಟ್ಟಿಗೆದ್ದ ದಮಯಂತಿ, 'ನಳನೇ ನನ್ನ ಪತಿ. ಅವನುಳಿದರೆ ನನಗೆ ಮರಣವೇ ಗತಿ' ಎಂಬ ನಿರ್ಧಾರದ ನುಡಿ ನುಡಿಯುತ್ತಾಳೆ. ಅಪ್ರತ್ಯಕ್ಷವಾಗಿ ನಳನು ದಮಯಂತಿಯ ಮನದ ಪ್ರೇಮದಾಳವನ್ನು ಅಳೆದಂತಹ ಸುಂದರ ಸನ್ನಿವೇಶ ನಿರ್ಮಾಣ ಕನಕದಾಸರದು. ಅದು ಅವರಿಗಿಂತಲೂ ಹಿಂದಿನವರಾದ ಚೌಂಡರಸನ ಕಲ್ಪನೆ. ಆದರೆ ಮಹಾಭಾರತದಲ್ಲಿ ಅಂತಃಪುರಕ್ಕೆ ಆಗಮಿಸಿದ ನಳನನ್ನು ನೀನಾರೆಂದು ಕೇಳಿದಾಗ, 'ನಲಂ ಮಾಂ ವಿದ್ಧಿ ಕಲ್ಯಾಣಿ ದೇವದೂತಮಿಹಾಗತಂ' ಎಂದು ನೇರವಾಗಿ ತನ್ನ ಹೆಸರು ಹೇಳಿಕೊಂಡು, ತಾನಲ್ಲಿಗೆ ಬಂದ ಉದ್ದೇಶವನ್ನು ತಿಳಿಸಿ ಬಿಡುತ್ತಾನೆ. ಮೂಲಕ್ಕಿಂತಲೂ ಇಲ್ಲಿನ ಮಾರ್ಪಾಟು ಅರ್ಥಪೂರ್ಣವಾಗಿದೆ. ಮುಂದೆ ಅಡವಿಯಲ್ಲಿ ಹೆಬ್ಬಾವಿಗೆ ಬಲಿಯಾಗುತ್ತಿದ್ದ ದಮಯಂತಿಯನ್ನು ಬದುಕಿಸಿದ ಬೇಡನು ಅವಳ ರೂಪರಾಶಿಗೆ ಮಾರುಹೋಗಿ, ಅವಳನ್ನು ಕಾಮಿಸಲು ಹೋದಾಗ ವ್ಯಾಸರ ಭೈಮಿ ಬೇಡನನ್ನು ತನ್ನ ಪಾತಿವ್ರತ್ಯದ ಪ್ರಭಾವದಿಂದ ಸುಟ್ಟು ಹಾಕಿದರೆ, ಕನಕದಾಸರ ದಯಾಪೂರ್ಣೆ ದಮಯಂತಿ, 'ಪ್ರಾಣ ಉಳಿಸಿದ ನೀನು ತಂದೆಗೆ ಸಮಾನ'

ಎಂದು ವಿವೇಕದ ಮಾತುಗಳನ್ನು ಹೇಳಿ, ಬೇಡನಲ್ಲಿ ಕಾಮ ಪ್ರೇಮವಾಗುವಂತೆ, ಪ್ರೇಮ ಭಕ್ತಿಯಾಗಿ ಪರಿಣಾಮಿಸುವಂತೆ ಮಾಡುತ್ತಾಳೆ. ಈ ಸನ್ನಿವೇಶದ ಪರಿವರ್ತನೆಯಿಂದಾಗಿ ದಮಯಂತಿ ಬೆಳಗಿದ ಮಾನವೀಯತೆ ಮೆಚ್ಚುವಂಥದು.

ಇಂತಹ ಕೆಲವು ಮಾರ್ಪಾಟುಗಳಲ್ಲಿ ಕನಕದಾಸರ ಹೆಗ್ಗಳಿಕೆ ಇದೆ. ಆದರೆ ದೈವದ ಉತ್ಕರ್ಷಾಮಹತ್ವವನ್ನು ಬಿತ್ತರಿಸುವಲ್ಲಿ ಮೂಲಬಿಂದುವನ್ನು ವ್ಯತ್ಯಸ್ತಗೊಳಿಸಿಲ್ಲ. ಎಲ್ಲ ನಳನೃಪಕಾವ್ಯ, ಕಥೆ, ನಾಟಕಗಳು ಹೇಳುವುದನ್ನೇ ಇವರೂ ಹೇಳಿದ್ದಾರೆ. ಮಹಾಭಾರತದ ವನಪರ್ವ ಭಾಗದಲ್ಲಿ ಬರುವ ಇಪ್ಪತ್ತೆಂಟು ಅಧ್ಯಾಯಗಳ ಸುವಿಸ್ತಾರವಾದ ನಳೋಪಾಖ್ಯಾನವು ಕನಕದಾಸರ ನಳಚರಿತ್ರೆಯಲ್ಲಿ ಕೇವಲ ಒಂಬತ್ತು ಸಂಧಿಗಳ ಖಂಡಕಾವ್ಯವಾಗಿ ರೂಪಗೊಂಡಿರುವುದನ್ನು ನೋಡಿದರೆ ಕನಕದಾಸರ ಸಂಗ್ರಹಶಕ್ತಿ, ವರ್ಣನೆಗೆ ಮನಗೊಡದ ಸಂಯಮ ಇವು ವೇದ್ಯವಾಗುತ್ತವೆ. ಕನಕದಾಸರಿಗೆ ಕಥೆ ಮುಖ್ಯವೇ ಹೊರತು ಶ್ರೀಹರ್ಷನಂತೆ ವರ್ಣನೆ ಅಲ್ಲ. ಪಂಚಮಹಾಕಾವ್ಯಗಳಲ್ಲೊಂದಾದ ಶ್ರೀಹರ್ಷನ (ಕ್ರಿ.ಶ. ೧೨ನೆಯ ಶತಮಾನ) 'ನೈಷಧೀಯ ಚರಿತ' ವರ್ಣನಾ ಪ್ರಧಾನ ಕಾವ್ಯ. ಕಥೆಯೇ ಇಲ್ಲದ ಕಾವ್ಯರಚನೆ ಹೇಗಿರುತ್ತದೆಂಬುದನ್ನು ತನ್ನ ಕೃತಿಯ ಮೂಲಕ ತೋರಿಸಿಕೊಟ್ಟಿದ್ದಾನೆ. ಅದನ್ನೇ ಒಂದು ಸವಾಲಾಗಿ ಸ್ವೀಕರಿಸಿರುವಂತಿದೆ ಹರ್ಷ. ಕೇವಲ ದಮಯಂತಿಯ ಸ್ವಯಂವರ, ಸ್ವಯಂವರದ ಅನಂತರದಲ್ಲಿ ಕಲಿಪುರುಷನಿಗೂ ಇಂದ್ರಾದಿ ದೇವತೆಗಳಿಗೂ ನಡೆಯುವ ವಾಗ್ವಾದ ಮತ್ತು ಕಲಿಯ ನಾಸ್ತಿಕವಾದದ ಖಂಡನೆ, ಅಂತ್ಯದಲ್ಲಿ ನಳದಮಯಂತಿಯರ ಪ್ರಥಮಮಿಲನದ ಜೇನಿರುಳ ಬಣ್ಣನೆ– ಇದಿಷ್ಟೇ ಅಲ್ಲಿನ ಕಥಾಭಿತ್ತಿ. ಆದರೆ ಪ್ರಕಾಂಡ ಪಂಡಿತನೂ ಪ್ರಚಂಡ ತರ್ಕಪ್ರಿಯನೂ ಅಪ್ರತಿಮ ಪ್ರತಿಭಾಶಾಲಿಯೂ ಆದ ಶ್ರೀಹರ್ಷನು ಆ ಭಿತ್ತಿಯ ಮೇಲೆ ಅನ್ಯಾದೃಶ ವರ್ಣಚಿತ್ರ ಗಳನ್ನು ಬಿಡಿಸಿದ್ದಾನೆ. ಇಂದುಮತಿ ಸ್ವಯಂವರವು ನಾಲ್ಕು ಸರ್ಗಗಳಷ್ಟು ವ್ಯಾಪ್ತಿ ಹೊಂದಿದೆ. ನಾರಿಯರ ರೂಪಲಾವಣ್ಯಗಳ ವರ್ಣನೆಯಲ್ಲಿ ಹರ್ಷ ಅದ್ವಿತೀಯ. ದಮಯಂತಿಯ ಚಿತ್ರವನ್ನಂತೂ ನಾನಾ ಬಣ್ಣಗಳಿಂದ ಬಿಡಿಸಿದ್ದಾನೆ. ವಿಪ್ರಲಂಬ ಶೃಂಗಾರದ ವರ್ಣನೆಯಲ್ಲಿ, ಮೈಹಾಸಿ ಮಲಗಿರುವ ನಿಸರ್ಗ ಸೌಂದರ್ಯದ ಬಣ್ಣನೆಯಲ್ಲಿ ಹರ್ಷ ಯಾರಿಗೂ ಎರಡನೆಯವನಲ್ಲ. ಅದರಿಂದಾಗಿ ನೈಷಧ ಇಪ್ಪತ್ತೆರಡು ಸರ್ಗಗಳ ಎರಡು ಸಾವಿರದ ಎಂಟುನೂರ ಮೂವತ್ತು ಶ್ಲೋಕಗಳ ಗಾತ್ರ ಪಾತ್ರವುಳ್ಳದ್ದಾಗಿದೆ.

ಶ್ರೀಹರ್ಷ ಓರ್ವ ದಾರ್ಶನಿಕ. ಆದಿ ಜಗದ್ಗುರು ಶ್ರೀಶಂಕರರನ ಅದ್ವೈತ ದರ್ಶನದ ಪಾರಮ್ಯವನ್ನು ಅಭಿವ್ಯಕ್ತಿಸುವುದೇ ಅವನ ಮೂಲ ಉದ್ದೇಶವಾಗಿದೆ ನೈಷಧದಲ್ಲಿ. ಅದರಿಂದಾಗಿ ಅನ್ಯ ಧರ್ಮ ದರ್ಶನಗಳನ್ನು ಖಂಡಿಸುತ್ತಾನೆ. 'ಖಂಡನ ಖಂಡ ಖಾದ್ಯ'ದಂತಹ ಅದ್ವೈತ ಪ್ರಾತಿಭಾ ಸೂರ್ಯನನ್ನು ಸೃಷ್ಟಿಸಿದ

ಈ ನೈಯಾಯಿಕನಿಗೆ ನೈಷಧ ಕಾವ್ಯ ಸಂದರ್ಭದ ತರ್ಕ ಕಷ್ಟವೆನಿಸಲಿಲ್ಲ. ಹೀಗೆ ವರ್ಣನಾಪ್ರಧಾನವೂ ತರ್ಕಭೂಯಿಷ್ಠವೂ ಅದ್ವೈತದರ್ಶನ ಪ್ರತಿಷ್ಠಾಪನೋದ್ದೇಶಿತವೂ ಆದ ಅಮೋಘ, ಅಪ್ರತಿಮವಾದ ಹರ್ಷನ ಆಚಾರ್ಯಕೃತಿಯ ಜೊತೆಯಲ್ಲಿ ಕನಕದಾಸರ ನಳಚರಿತ್ರೆಯನ್ನು ನಿಲ್ಲಿಸಿ ನೋಡಲಾಗದು. ಆದರೂ ಹರ್ಷನಿಗೆ ದರ್ಶನ–ವರ್ಣನೆಗಳು ಮುಖ್ಯವಾದಂತೆ, ಕನಕದಾಸರಿಗೆ ದೈವ ಕಥನಗಳು ಮುಖ್ಯ ಎಂಬುದನ್ನು ಮರೆಯಲೂ ಆಗದು.

ಕನಕದಾಸರು ತಮ್ಮ ಮೋಹನ ತರಂಗಿಣಿಯಲ್ಲಿ ವಹಿಸಿದಷ್ಟು ಸ್ವಾತಂತ್ರ್ಯವನ್ನು ನಳಚರಿತ್ರೆಯಲ್ಲಿ ವಹಿಸಿಲ್ಲ ಎಂದು ಹೇಳಬಹುದು. ಮೋಹನ ತರಂಗಿಣಿಯ ಕಥೆ (Story) ಪುರಾಣ, ಭಾರತ ಭಾಗವತ ಹರಿವಂಶಾದಿಗಳಿಗೆ ಸೇರಿದ್ದು; ಆದರೆ ವಸ್ತು (Theme) ಅವರ ಸ್ವಂತದ್ದು. ವಿಶ್ವಾಂತರಾಳದಲ್ಲಿ ಯಾವಜ್ಜೀವವೂ ನೂತನ ಚೇತನವಾಗಿ ಪ್ರವಹಿಸುತ್ತಿರುವ 'ಪ್ರೇಮ' ಎಂಬ ಅದಮ್ಯ ಅವ್ಯಕ್ತ ಅಸಾಮಾನ್ಯ ಕ್ರಿಯಾಶಕ್ತಿಯೇ ಕಾವ್ಯದ ಕಥಾವಸ್ತು ಮತ್ತು ಕಥಾನಾಯಕ ! ಅಲ್ಲಿ ಬರುವ ಕೃಷ್ಣ–ರುಕ್ಮಿಣಿ, ಪ್ರದ್ಯುಮ್ನ–ರತಿ, ಅನಿರುದ್ಧ–ಉಷೆ ಎಲ್ಲರೂ ಆ ಶಕ್ತಿಯೊಡನೆ ಸ್ಪಂದಿಸುವ ಅಂಶಮಾತ್ರರು. ಅಂತೆಯೇ ಕನಕದಾಸರಲ್ಲಿ ಮತ್ತೊಂದು ಗುಣ ಎಂದರೆ ಆದ್ಯತನವನ್ನು ಅನಾದಿಗಳೆದುರು ಹೊಂದಿಸಿ ಹೇಳುವುದು. ಉದಾಹರಣೆಗೆ ದ್ವಾರಕಾವತಿಯ ವರ್ಣನೆಯಲ್ಲಿ ಮಾಡಿರುವ ವಿಜಯನಗರ ವೈಭವದ ಸಮೀಕರಣ. ಇದು ನಳಚರಿತ್ರೆಯಲ್ಲೂ ಅಲ್ಲಿ–ಇಲ್ಲಿ ಕಾಣಿಸಿಕೊಂಡಿದೆ. ಒಟ್ಟಿನಲ್ಲಿ, ಪ್ರಾಚೀನ ಪುರಾಣ ಮಂಗಳಕಾವ್ಯಗಳಲ್ಲಿ ಸಮಕಾಲೀನ ಬದುಕನ್ನು ಬೆಸೆಯುವಲ್ಲಿ ಕನಕದಾಸರು ಯಶಸ್ವಿಯಾಗಿದ್ದಾರೆ.

ಕನಕದಾಸರ ಕಾವ್ಯ ಶೈಲಿಯಲ್ಲಿ ಪ್ರಸಾದ ಗುಣವಿದೆ. ಅದು ಎಲ್ಲೆಡೆಯಲ್ಲೂ ಅಕ್ಲಿಷ್ಟ. ಆದರೆ ಪ್ರಭಾವಶಾಲಿ. ಅದರಲ್ಲಿ ಜಲಪಾತದ ನಿರ್ಘೋಷವಿಲ್ಲದಿದ್ದರೂ ಸಮತಟ್ಟಿನಲ್ಲಿ ಹರಿಯುವ ತಿಳಿ ತರಂಗಿಣಿಯ ಜುಳುಜುಳುಗೈವ ಮಧುರ ಮಂಜುಳ ನಿನಾದ ತುಂಬಿದೆ. ಕವಿಯ ಭಾವ ಗುರುತಿಸುವಷ್ಟು ಸ್ಪಷ್ಟ, ಅವರು ಬಳಸಿದ ಭಾಷೆ ತೆರೆದಿಡುವಷ್ಟು ಸ್ಫುಟ ಹೆಚ್ಚು ಅಥವಾ ಹುಚ್ಚು ವರ್ಣನೆಗಳಿಲ್ಲವಾದರೂ ಬಣ್ಣಿತವಾದವು ಮನ ಮುಟ್ಟುವಂಥವು. ಒಂದೆರಡು ಉದಾಹರಣೆಗಳು:
ಯೌವನವತಿಯಾದ ದಮಯಂತಿ–

**ನಿರಿಗುರುಳ ಪವಳಾಧರದ ಉರು**
**ತರದ ತೋಳ್ಗಳ ಕಂಬುಕಂಠದ**
**ತರಳ ನಯನದ ಸಂಪಗೆಯ ನಾಸಿಕದ ಪೆರೆನೊಸಲ**
**ಹರಿಯ ಮಧ್ಯದ ಹಂಸಗಮನದ**
**ಗುರು ಕುಚದ ಕರಪಲ್ಲವದ ಸರ**
**ಸಿರುಹಮುಖಿ ನಲಿದಾಡುತ್ತಿದ್ದಳು ರಾಜಭವನದಲಿ** **I–೩೩**

ಅಲೆ ಏರಿ ಅಲೆ ಇಳಿಯುವಂತಿರುವ ಗುಂಗುರುಗೂದಲಿನ ಅಂಗನೆ, ಹವಳದಂಥ ಚೆಂದುಟಿಯ ಚೆಲುವೆ, ಶ್ರೇಷ್ಠ ನಳಿದೋಳುಗಳ ನಲ್ಲೆ, ಶಂಖ ವಿನ್ಯಾಸದ ವಂಕವಕ್ರದ ಬೆಡಗಿ, ಚಿಗರಿಗಂಗಳ ಚೆದುರೆ, ಸಂಪಗೆಯು ಸೊಂಪಾದ ಮೂಗಿನ ಸೊಬಗಿ, ಬೆಳುದಿಂಗಳ ತೊರೆ ಹರಿಸುವ ವಿಶಾಲವಾದ ಹಣೆಯ ಸುಮಂಗಲೆ, ಸಿಂಹದಂಥಾ ಬಡನಡುವುಳ್ಳ ಬೆಡಗಿ, ಹಂಸಗಮನ ನಿಸ್ತ್ರಿಂಶೆ, ತುಂಬಿದೆದೆಯ ದುಂಡುರುಂಬೆ, ಚಿಗುರು ಕೈಗಳ ಚೆನ್ನೆ, ತಾವರೆಯ ಚೆಲುವಾಂತ ಕ್ರಾಂತಿಲಕ್ಷ್ಮಿ– ಇಂತೆಲ್ಲ ವರ್ಣನೆಗಳಲ್ಲಿ ಹೆಣ್ಣಿನ ಅಂಗಾಂಗಗಳಲ್ಲಿ ಸಮೀಕೃತವಾದ ನಿಸರ್ಗದ ಸೊಬಗು ತುಂಬಾ ಸಹಜ ಹಾಗೂ ಸ್ವಾಭಾವಿಕ.

ಕಾರ್ಕೋಟಕನು ಕಚ್ಚಿದಾಗ ನಳನಲ್ಲಾದ ದೈಹಿಕ ಬದಲಾವಣೆ ಹಾಗೂ ರೂಪ ವಿರೂಪದ ಬಣ್ಣನೆ ಹೀಗಿದೆ:

**ದೊಡ್ಡ ಹೊಟ್ಟೆಯ ಗೂನುಬೆನ್ನಿನ**
**ಅಡ್ಡ ಮೋರೆಯ ಗಂಟುಮೂಗಿನ**
**ದೊಡ್ಡ ಕೈಕಾಲುಗಳ ಉದುರಿದ ರೋಮ ಮೀಸೆಗಳ**
**ಜಡ್ಡು ದೇಹದ ಗುಜ್ಜುಗೊರಲಿನ**
**ಗಿಡ್ಡ ರೂಪಿನ ಹರುಕು ಗಡ್ಡದ**
**ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ** **VI–೩೩**

ಇದಕ್ಕೆ ವಿವರಣೆಯೇ ಬೇಕಿಲ್ಲ. ಅಷ್ಟು ಸರಳ, ಅಷ್ಟು ನೈಜ.

ಕನಕದಾಸರ ಸುಭಗ ಸುಂದರ ಶೈಲಿಗೆ ಸಖಿಯೊಡನೆ ವಿವಾಹಮಂಟಪಕ್ಕೆ ಬಂದ ದಮಯಂತಿಯ ರೂಪರಾಜಿಯ ಬಣ್ಣನೆಯನ್ನು ಹೆಸರಿಸಬಹುದು. ದಮಯಂತಿ:

**ಕುಡಿತೆಗಂಗಳ ಸಿರಿಮುಡಿಯ ಬಡ**
**ನಡುವ ಸೆಳೆವತಿ ಬೆಡಗಿನಲಿ ಹೊಂ**
**ಗೊಡದ ಮೊಲೆ ವೈಯಾರದುಡುಗೆಯ ಸಿರಿಯ ಸಡಗರದ**
**ತೊಡರ ಝುಣಝುಣ ರವದ ಮೆಲ್ಲಡಿ**
**ಯಿಡುವ ಗಮನದ ಭರದಿ ಕಿರುಬೆಮ**
**ರಿಡುತ ಬಂದಳು ಸಖಿಯರೊಡನೆ ವಿವಾಹಮಂಟಪಕೆ** **III–೫೬**

ಕನಕದಾಸರ ಕವಿತಾ ಶಕ್ತಿಗೆ ಇವು ಕೆಲವು ಸಾಕು.

'ರಾಗಿಣಿ' **ಸಾ.ಶಿ. ಮರುಳಯ್ಯ**
೩೦–೫–೧೯೯೧

# ಹರಿಭಕ್ತಿ ಸಾರ

ಕುಲಗಿರಿಗಳನ್ವಯದ ಧಾರಿಣಿ
ಜಲಧಿ ಪಾವಕ ಮರುತ ಜಲ ನಭ
ಜಲಜಸಖ ಶೀತಾಂಶು ತಾರೆಗಳುಳ್ಳ ಪರಿಯಂತೆ
ಚಲನೆಯಿಲ್ಲದ ನಿನ್ನ ಚರಿತೆಯು
ಒಲಿದು ಧರೆಯೊಳಗೊಪ್ಪುವಂದದಿ
ಚೆಲುವ ಚೆನ್ನಿಗರಾಯ ರಕ್ಷಿಸು ನಮ್ಮನನವರತ

# ಹರಿಭಕ್ತಿ ಸಾರ

ಶ್ರೀಯರಸ ಗಾಂಗೇಯನುತ ಕೌಂ
ತೇಯ ವಂದಿತ ಚರಣ ಕಮಲದ
ಛಾಯತಾಂಬಕ ರೂಪ ಚಿನ್ಮಯ ದೇವಕೀತನಯ
ರಾಯ ರಘುಕುಲವರ್ಯ ಭೂಸುರ
ಪ್ರೀಯ ವರಪುರನಿಲಯ ಚೆನ್ನಿಗ
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ । ೧ ।

ದೇವ ದೇವ ಜಗದ್ಭರಿತ ವಸು
ದೇವಸುತ ಜಗದೇಕನಾಥ ರ
ಮಾವಿನೋದಿತ ಸಜ್ಜನಾನತ ನಿಖಿಲ ಗುಣಭರಿತ
ಭಾವಜಾರಿಪ್ರಿಯ ನಿರಾಮಯ
ರಾವಣಾಂತಕ ರಘುಕುಲಾನ್ವಯ
ದೇವ ಅಸುರ ವಿರೋಧಿ ರಕ್ಷಿಸು ನಮ್ಮನನವರತ । ೨ ।

ಅನುಪಮಿತ ಚಾರಿತ್ರ ಕರುಣಾ
ವನಧಿ ಭಕ್ತ ಕುಟುಂಬಿ ಯೋಗೀ
ಜನಹೃದಯ ಪರಿಪೂರ್ಣ ನಿತ್ಯಾನಂದ ನಿಗಮನುತ
ವನಜನಾಭ ಮುಕುಂದ ಮುರಮ
ರ್ದನ ಜನಾರ್ದನ ತ್ರೈಜಗತ್ಪಾ
ವನ ಸುರಾರ್ಚಿತ ದೇವ ರಕ್ಷಿಸು ನಮ್ಮನನವರತ । ೩ ।

ಕಮಲಸಂಭವ ವಿನುತ ವಾಸವ
ನಮಿತ ಮಂಗಳ ಚರಿತ ದುರಿತ
ಕ್ಷಮಿತ ರಾಘವ ವಿಶ್ವಪೂಜಿತ ವಿಶ್ವ ವಿಶ್ವಮಯ
ಅಮಿತ ವಿಕ್ರಮ ಭೀಮ ಸೀತಾ

ರಮಣ ವಾಸುಕಿಶಯನ ಖಗಪತಿ
ಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ ।೪।

ಕ್ಷೀರವಾರಿಧಿಶಯನ ಶಾಂತಾ
ಕಾರ ವಿವಿಧ ವಿಚಾರ ಗೋಪೀ
ಜಾರ ನವನೀತಚೋರ ಚಕ್ರಾಧಾರ ಭವದೂರ
ಮಾರಪಿತ ಗುಣಹಾರ ಸರಸಾ
ಕಾರ ರಿಪುಸಂಹಾರ ತುಂಬುರು
ನಾರದಪ್ರಿಯ ವರದ ರಕ್ಷಿಸು ನಮ್ಮನನವರತ ।೫।

ತಾಮರಸದಳನಯನ ಭಾರ್ಗವ
ರಾಮ ಹಲಧರರಾಮ ದಶರಥ
ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ
ಸಾಮಗಾನ ಪ್ರೇಮ ಕಾಂಚನ
ಧಾಮಧರ ಸುತ್ರಾಮ ವಿನಮಿತ
ನಾಮ ರವಿಕುಲಸೋಮ ರಕ್ಷಿಸು ನಮ್ಮನನವರತ ।೬।

ವೇದಗೋಚರ ವೇಣುನಾದ ವಿ
ನೋದ ಮಂದರಶೈಲಧರ ಮಧು
ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ
ಯಾದವೇಂದ್ರ ಯಶೋದೆನಂದನ
ನಾದಬಿಂದು ಕಳಾತಿಶಯ ಪ್ರ
ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ ।೭।

ಅಕ್ಷಯಾಶ್ರಿತ ಸುಜನಜನ ಸಂ
ರಕ್ಷಣ ಶ್ರೀವತ್ಸ ಕೌಸ್ತುಭ
ಮೋಕ್ಷದಾಯಕ ಕುಟಿಲದಾನವ ಶಿಕ್ಷ ಕುಮುದಾಕ್ಷ
ಪಕ್ಷಿವಾಹನ ದೇವಸಂಕುಲ

ಪಕ್ಷ ನಿಗಮಾಧ್ಯಕ್ಷ ವರನಿಟಿ
ಲಾಕ್ಷಸಖ ಸರ್ವೇಶ ರಕ್ಷಿಸು ನಮ್ಮನನವರತ ।೮।

ಚಿತ್ರಕೂಟನಿವಾಸ ವಿಶ್ವಾ
ಮಿತ್ರ ಕ್ರತು ಸಂರಕ್ಷ ರವಿಶಶಿ
ನೇತ್ರ ಭವ್ಯಚರಿತ್ರ ಸದ್ಗುಣಗಾತ್ರ ಸತ್ಪಾತ್ರ
ಧಾತ್ರಿಜಾಂತಕ ಕಪಟನಾಟಕ
ಸೂತ್ರ ಪರಮ ಪವಿತ್ರ ಫಲ್ಗುನ
ಮಿತ್ರ ವಾಕ್ಯವಿಚಿತ್ರ ರಕ್ಷಿಸು ನಮ್ಮನನವರತ ।೯।

ಮಂಗಳಾತ್ಮಕ ದುರಿತತಿಮಿರ ಪ
ತಂಗ ಗರುಡತುರಂಗ ರಿಪುಮದ
ಭಂಗ ಕೀರ್ತಿತರಂಗ ಪುರಹರಸಂಗ ನೀಲಾಂಗ
ಅಂಗದ ಪ್ರಿಯನಂಗಪಿತ ಕಾ
ಳಿಂಗಮರ್ದನ ಅಮಿತ ಕರುಣಾ
ಪಾಂಗ ಶ್ರೀನರಸಿಂಗ ರಕ್ಷಿಸು ನಮ್ಮನನವರತ ।೧೦।

ದಾಶರಥಿ ವೈಕುಂಠನಗರ ನಿ
ವಾಸ ತ್ರೈಜಗದೀಶ ಪಾಪ ವಿ
ನಾಶ ಪರಮವಿಲಾಸ ಹರಿ ಸರ್ವೇಶ ದೇವೇಶ
ವಾಸುದೇವ ದಿನೇಶ ಶತ ಸಂ
ಕಾಶ ಯದುಕುಲವಂಶತಿಲಕ ಪ
ರಾಶರಾನತ ದೇವ ರಕ್ಷಿಸು ನಮ್ಮನನವರತ ।೧೧।

ಕುಂದಕುಟ್ಮಲರದನ ಪರಮಾ
ನಂದ ಹರಿ ಗೋವಿಂದ ಸನಕ ಸ
ನಂದವಂದಿತ ಸಿಂಧುಬಂಧನ ಮಂದರಾದ್ರಿಧರ
ಇಂದಿರಾಪತಿ ವಿಜಯಸಖ ಅರ

ವಿಂದನಾಭ ಪುರಂದರಾರ್ಚಿತ
ನಂದಕಂದ ಮುಕುಂದ ರಕ್ಷಿಸು ನಮ್ಮನನವರತ ।೧೨।

ಬಾಣಬಾಹುಚ್ಛೇದ ರಾವಣ
ಪ್ರಾಣನಾಶನ ಪುಣ್ಯನಾಮ ಪು
ರಾಣ ಪುರುಷೋತ್ತಮ ನಿಪುಣ ಅಣುರೇಣು ಪರಿಪೂರ್ಣ
ಕ್ಷೋಣಿಪತಿ ಸುಲಲಿತ ಸುದರ್ಶನ
ಪಾಣಿ ಪಾಂಡವ ರಾಜಕಾರ್ಯ ಧು
ರೀಣ ಜಗನಿರ್ಮಾಣ ರಕ್ಷಿಸು ನಮ್ಮನನವರತ ।೧೩।

ನೀಲವರ್ಣ ವಿಶಾಲ ಶುಭಗುಣ
ಶೀಲ ಮುನಿಕುಲ ಪಾಲ ಲಕ್ಷ್ಮೀ
ಲೋಲ ರಿಪುಶಿಶುಪಾಲ ಮಸ್ತಕಶೂಲ ವನಮಾಲ
ಮೂಲಕಾರಣ ವಿಮಲ ಯಾದವ
ಜಾಲಹಿತ ಗೋಪಾಲ ಅಗಣಿತ
ಲೀಲ ಕೋಮಲಕಾಯ ರಕ್ಷಿಸು ನಮ್ಮನನವರತ ।೧೪।

ನಾಗನಗರಿ ಧರಿತ್ರಿ ಕೋಶ ವಿ
ಭಾಗ ತಂತ್ರನಿಯೋಗ ಗಮನ ಸ
ರಾಗ ಪಾಂಡವರಾಜ ಜಿತಸಂಗ್ರಾಮ ನಿಸ್ಸೀಮ
ಯೋಗಗಮ್ಯ ಭವಾಬ್ಧಿ ವಿಷಧರ
ನಾಗಗಾರುಡಮಂತ್ರವಿದ ಭವ
ರೋಗವೈದ್ಯವಿಚಿತ್ರ ರಕ್ಷಿಸು ನಮ್ಮನನವರತ ।೧೫।

ಶ್ರೀಮದುತ್ಸಹದೇವಸುತ ಶ್ರೀ
ರಾಮ ನಿನ್ನಯ ಚರಣ ಸೇವಕ
ಪ್ರೇಮದಿಂ ಸಾಷ್ಟಾಂಗವೆರಗಿಯೆ ಮಾಳ್ಪೆ ಬಿನ್ನಪವ
ಈ ಮಹಿಯೊಳೀವರೆಗೆ ನಾವು ಸು

ಕ್ಷೇಮಿಗಳು ನಿನ್ನಯ ಪದಾಬ್ಜ
ಕ್ಷೇಮವಾರ್ತೆಯನರುಹಿ ರಕ್ಷಿಸು ನಮ್ಮನನವರತ ।೧೬।

ಈಗಲೀ ಮರ್ಯಾದೆಯಲಿ ಶರ
ಣಾಗತರ ಸೇವೆಯೊಳು ಹೊಂಪುಳಿ
ವೋಗಿ ಬಾಳುವರೇನು ಧನ್ಯರೊ ಹರ ಮಹಾದೇವ
ಭೋಗಭಾಗ್ಯವ ಬಯಸಿ ಮುಕ್ತಿಯ
ನೀಗಿ ನಿಮ್ಮನು ಭಜಿಸಲರಿಯದ
ರಾಗಿಗಳ ಮಾತೇನು ರಕ್ಷಿಸು ನಮ್ಮನನವರತ ।೧೭।

ಭಕ್ತಿಸಾರದ ಚರಿತೆಯನು ಹರಿ
ಭಕ್ತರಾಲಿಸುವಂತೆ ರಚಿಸುವೆ
ಯುಕ್ತಿಯಲಿ ಬರೆದೋದಿದವರಿಷ್ಟಾರ್ಥ ಸಿದ್ಧಿಪುದು
ಮುಕ್ತಿಗಿದು ನೆಲೆದೋರುವುದು ಹರಿ
ಭಕ್ತರಿದನಾಲಿಪುದು ನಿಜಮತಿ
ಭಕ್ತಿಗೊಲಿವಂದದಲಿ ರಕ್ಷಿಸು ನಮ್ಮನನವರತ ।೧೮।

ನಳಿನಲೋಚನ ನಿನ್ನ ಮೂರ್ತಿಯ
ಕಳೆ ಬೆಳಗುತಿದೆ ಲಹರಿಯಲಿ ಭೂ
ತಳದೊಳಚ್ಚರಿಯಾದ ನಾಮಾಮೃತ ಸಮುದ್ರದಲಿ
ಬಳಸುವರು ಸತ್ಕವಿಗಳವರ
ಗ್ಗಳಿಕೆಯೆನಗಿನಿತಿಲ್ಲ ಸನ್ಮತಿ
ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ।೧೯।

ಗಿಳಿಯ ಮರಿಯನು ತಂದು ಪಂಜರ
ದೊಳಗೆ ಪೋಷಿಸಿ ಕಲಿಸಿ ಮೃದುನುಡಿ
ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ
ತಿಳುಹು ಮತಿಯನು ಎನ್ನ ಜಿಹ್ವೆಗೆ

ಮೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ।೨೦।

ಪೊಗಳಲಳವೇ ನಿನ್ನ ನಾಮವ
ಸುಗುಣ ಸಚ್ಚಾರಿತ್ರ ಕಥನವ
ನಗಣಿತೋಪಮ ಅಮಿತ ವಿಕ್ರಮ ಗಮ್ಯ ನೀನೆಂದು
ನಿಗಮತತಿ ಕೈವಾರಿಸುತ ಪದ
ಯುಗವ ಕಾಣದೆ ಬಳಲುತಿದೆ ವಾ
ಸುಕಿಶಯನ ಸರ್ವೇಶ ರಕ್ಷಿಸು ನಮ್ಮನನವರತ ।೨೧।

ವೇದ ಶಾಸ್ತ್ರ ಪುರಾಣ ಪುಣ್ಯದ
ಹಾದಿಯನು ನಾನರಿಯೆ ತರ್ಕದ
ವಾದದಲಿ ಗುರುಹಿರಿಯರರಿಯದ ಮೂಢಮತಿಯೆನಗೆ
ಆದಿಮೂರುತಿ ನೀನು ನೆರೆ ಕರು
ಣೋದಯನು ಹೃದಯಾಂಗಣದಿ ಜ್ಞಾ
ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ।೨೨।

ಹಸಿವರಿತು ತಾಯ್ ತನ್ನ ಶಿಶುವಿಗೆ
ಒಸೆದು ಮೊಲೆ ಕೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು
ಬಸಿರೊಳಗೆ ಬ್ರಹ್ಮಾಂಡಕೋಟಿಯ
ಪಸರಿಸಿದ ಪರಮಾತ್ಮ ನೀನೆಂ
ದುಸಿರುತಿವೆ ವೇದಗಳು ರಕ್ಷಿಸು ನಮ್ಮನನವರತ ।೨೩।

ಇಬ್ಬರಣುಗರು ನಿನಗೆ ಅವರೊಳ
ಗೊಬ್ಬ ಮಗನೀರೇಳು ಲೋಕದ
ಹೆಬ್ಬೆಳಸು ಬೆಳೆವಂತೆ ಕಾರಣಕರ್ತನಾದವನು
ಒಬ್ಬ ಮಗನದ ಬರೆವ ಕರಣಿಕ

ರಿಬ್ಬರೇ ಲೋಕಪ್ರಸಿದ್ಧರು
ಹಬ್ಬಿಸಿದೆ ಪ್ರಾಣಿಗಳ ರಕ್ಷಿಸು ನಮ್ಮನನವರತ ।೨೪।

ಸಿರಿಯು ಕುಲಸತಿ ಸುತನು ಕಮಲಜ
ಹಿರಿಯ ಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು
ನಿರುತ ಮಾಯೆಯು ದಾಸಿ ನಿಜ ಮಂ
ದಿರವಜಾಂಡವು ಜಂಗಮ ಸ್ಥಾ
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ ।೨೫।

ಸಾಗರನ ಮಗಳರಿಯದಂತೆ ಸ
ರಾಗದಲಿ ಸಂಚರಿಸುತಿಹ ಉ
ದ್ಯೋಗವೇನು ನಿಮಿತ್ತ ಕಾರಣವಿಲ್ಲ ಲೋಕದಲಿ
ಭಾಗವತರಾದವರ ಸಲಹುವ
ನಾಗಿ ಸಂಚರಿಸುವುದು ಈ ಭವ
ಸಾಗರದಿ ಮುಳುಗಿಸದೆ ರಕ್ಷಿಸು ನಮ್ಮನನವರತ ।೨೬।

ಹಸ್ತಿವಾಹನನಾದಿಯಾದ ಸ
ಮಸ್ತ ದೇವನಿಕಾಯದೊಳಗೆ ಪ್ರ
ಶಸ್ತನಾವನು ನಿನ್ನವೋಲ್ ಶರಣಾಗತರ ಪೊರೆವ
ಹಸ್ತಕಲಿತ ಸುದರ್ಶನದೊಳರಿ
ಮಸ್ತಕವನಿಳುಹುವ ಪರಾತ್ಪರ
ವಸ್ತುವಲ್ಲವೆ ನೀನು ರಕ್ಷಿಸು ನಮ್ಮನನವರತ ।೨೭।

ಹಗೆಯರಿಗೆ ವರವೀವರಿಬ್ಬರು
ತೆಗೆಯಲರಿಯರು ಕೊಟ್ಟ ವರಗಳ
ತೆಗೆದುಕೊಡುವ ಸಮರ್ಥರಾರೀ ಜಗಕೆ ನಿನ್ನಂತೆ
ಸುಗುಣರಿನ್ನಾರುಂಟು ಕದನವ

ಬಗೆದು ನಿನ್ನೊಳು ಜಯಿಸುವವರೀ
ಜಗದೊಳುಂಟೇ ದೇವ ರಕ್ಷಿಸು ನಮ್ಮನನವರತ ।೨೮।

ಸುಮನಸರ ವೈರದಲಿ ಕೆಲಬರು
ಕುಮತಿಗಳು ತಪದಿಂದ ಭರ್ಗನ
ಕಮಲಜನ ಪದಯುಗವ ಮೆಚ್ಚಿಸಿ ವರವ ಪಡೆದಿಹರು
ಸಮರ ಮುಖದೊಳಗುಪಮೆಯಲಿ ವಿ
ಕ್ರಮದಿ ವೈರವ ಮಾಡಿದವರಿಗೆ
ಅಮರಪದವಿಯನಿತ್ತೆ ರಕ್ಷಿಸು ನಮ್ಮನನವರತ ।೨೯।

ಬಲಿಯ ಬಂಧಿಸಿ ಮೊರೆಯಿಡುವ ಸತಿ
ಗೊಲಿದು ಅಕ್ಷಯವಿತ್ತು ಕರುಣದಿ
ಮೊಲೆಯನುಣಿಸಿದ ಬಾಲಿಕೆಯ ಪಿಡಿದಸುವನಪಹರಿಸಿ
ಶಿಲೆಯ ಸತಿಯಳ ಮಾಡಿ ತ್ರಿಪುರರ
ಲಲನೆಯರ ವ್ರತಗೆಡಿಸಿ ಕೂಡಿದ
ಕೆಲಸ ಉತ್ತಮವಾಯ್ತು ರಕ್ಷಿಸು ನಮ್ಮನನವರತ ।೩೦।

ಕರಿಯ ಕಾಯ್ದಾ ಜಲದಿ ಮಕರವ
ತರಿದು ಹಿರಣ್ಯಾಕ್ಷಕನ ಸೀಳ್ದು
ತರಳನನು ತಲೆಗಾಯ್ದು ಶಕಟಾಸುರನ ಹತಮಾಡಿ
ದುರುಳ ಕಂಸನ ಕೊಂದು ಮಗಧನ
ಮುರಿದು ವತ್ಸನ ಹಮ್ಮಳಿಸಿ ಖರ
ಹರಣವನು ಹಿಂಗಿಸಿದೆ ರಕ್ಷಿಸು ನಮ್ಮನನವರತ ।೩೧।

ಶಿಶುತನದ ಸಾಮರ್ಥ್ಯದಲಿ ಕೆಲ
ರಸುರರನು ಸಂಹರಿಸಿ ಚಕ್ರವ
ಬಿಸುಟು ಯೌವನ ಕಾಲದಲಿಯಾ ಪಾಂಡುಸುತರಿಂದ
ವಸುಮತಿಯ ಭಾರವನಿಳುಹಿ ಸಾ

ಹಸದಿ ಮೆರೆದವನಾಗಿ ನೀ ಮೆ
ಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು ನಮ್ಮನನವರತ ।೩೨।

ಎಲ್ಲರಲಿ ನೀನಾಗಿ ಸುಮನಸ
ರಲ್ಲಿ ಅತಿಹಿತನಾಗಿ ಯಾದವ
ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ
ಕೊಲ್ಲಿಸಿದೆ ಭೀಮಾರ್ಜುನರ ಕೈ
ಯಲ್ಲಿ ಕೌರವ ಕುಲವನೆಲ್ಲವ
ಬಲ್ಲಿದನು ನೀನಹುದು ರಕ್ಷಿಸು ನಮ್ಮನನವರತ ।೩೩।

ನರಗೆ ಸಾರಥಿಯಾಗಿ ರಣದೊಳು
ತುರಗ ನೀರಡಿಸಿದರೆ ವಾರಿಯ
ಸರಸಿಯನು ನಿರ್ಮಿಸಿ ಕಿರೀಟಿಯ ಕೈಲಿ ಸೈಂಧವನ
ಶಿರವ ಕೆಡುಹಿಸಿ ಅವನ ತಂದೆಯ
ಕರತಳಕೆ ನೀಡಿಸಿದೆ ಹರಹರ
ಪರಮ ಸಾಹಸಿ ನೀನು ರಕ್ಷಿಸು ನಮ್ಮನನವರತ ।೩೪।

ಬವರದಲಿ ಖತಿಗೊಂಡು ಗದೆಯೊಳು
ಕವಿದು ನಿನ್ನ ಶ್ರುತಾಯುಧನು ಹೊ
ಕ್ಕವಘಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ
ವಿವರವೇನೋ ತಿಳಿಯೆನೀ ಮಾ
ಯಮನು ನೀನೇ ಬಲ್ಲೆ ನಿನ್ನಾ
ಯವನು ಬಲ್ಲವರುಂಟೆ ರಕ್ಷಿಸು ನಮ್ಮನನವರತ ।೩೫।

ಇಳೆಗೆ ಪತಿಯಾದವನು ಯಾದವ
ರೊಳಗೆ ಬಾಂಧವ ನಿನಗೆ ಸೋದರ
ದಳಿಯನಾದಭಿಮನ್ಯುವನು ಕೊಲ್ಲಿಸಿದೆ ಕೊಳುಗುಳದಿ
ಅಳಲಿನಬುಧಿಯೊಳದ್ದಿ ತಂಗಿಯ

ಬಳಲಿಸಿದೆ ಕುಲಗೋತ್ರ ಬಾಂಧವ
ರೊಳಗೆ ಕೀರ್ತಿಯ ಪಡೆದೆ ರಕ್ಷಿಸು ನಮ್ಮನನವರತ ।೩೬।

ತಾಯನಗಲಿದ ತನಯನೀ ರಾ
ಧೇಯನೊಳಗೆ ರಹಸ್ಯದಲಿ ಕುಲ
ದಾಯವನು ನೆರೆ ತಿಳುಹಿ ಅರ್ಜುನನಿಂದ ಕೊಲ್ಲಿಸಿದೆ
ಮಾಯಮಂತ್ರದ ಕುಟಿಲಗುಣದ
ನ್ಯಾಯವೊ ಇದು ನ್ಯಾಯವೋ ನಿ
ನ್ನಾಯವನು ನೀ ಬಲ್ಲೆ ರಕ್ಷಿಸು ನಮ್ಮನನವರತ ।೩೭।

ಕೊಲ್ಲ ಬಗೆದವನಾಗಿ ನೀ ಹಗೆ
ಯಲ್ಲಿ ಸಖ್ಯವ ಬೆಳಸಲದು ಹಿತ
ವಲ್ಲ ನಿನ್ನಯ ಗುಣವ ಬಲ್ಲವರಿಲ್ಲ ಯದುಕುಲದಿ
ಗೊಲ್ಲನಾರಿಯರೊಳು ಪ್ರವರ್ತಕ
ನಲ್ಲವೇ ಭಾವಿಸಲು ಲೋಕದೊ
ಳೆಲ್ಲರೂ ಸರಿ ನಿನಗೆ ರಕ್ಷಿಸು ನಮ್ಮನನವರತ ।೩೮।

ಮಗನ ಕೊಂದವನಾಳುವಂತಾ
ಸುಗುಣಿಯರು ಹದಿನಾರು ಸಾವಿರ
ಸೊಗಸುಗಾತಿಯರವರ ಮೋಹದ ಬಲೆಗೆ ವಿಟನಾಗಿ
ಬಗೆಬಗೆಯ ರತಿಕಲೆಗಳಲಿ ಕೂ
ರುಗರ ನಾಟಿಸಿ ಮೆರೆದು ನೀನೀ
ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ ।೩೯।

ಏನು ಮಾಡಿದರೇನು ಕರ್ಮವ
ನೀನೊಲಿಯದಿನ್ನಿಲ್ಲವಿದಕನು
ಮಾನವುಂಟೇ ಭ್ರಮರಕೀಟನ್ಯಾಯದಂದದಲಿ
ನೀನೊಲಿಯೆ ತೃಣ ಪರ್ವತವು ಪುಸಿ

ಯೇನು ನೀ ಪತಿಕರಿಸೆ ಬಳಿಕಿ
ನ್ನೇನು ಚಿಂತಿಸಲೇಕೆ ರಕ್ಷಿಸು ನಮ್ಮನನವರತ ।೪೦।

ಎಷ್ಟು ಮಾಡಲು ಮುನ್ನ ತಾ ಪಡೆ
ವಷ್ಟೆಯೆಂಬುದ ಲೋಕದೊಳು ಮತಿ
ಗೆಟ್ಟ ಮಾನವರಾಡುತಿಹರಾ ಮಾತದಂತಿರಲಿ
ಪಟ್ಟವಾರಿಂದಾಯ್ತು ಧ್ರುವನಿಗೆ
ಕೊಟ್ಟ ವರ ತಪ್ಪಿತೆ ಕುಚೇಲನಿ
ಗಿಷ್ಟಬಾಂಧವ ನೀನು ರಕ್ಷಿಸು ನಮ್ಮನನವರತ ।೪೧।

ತನ್ನ ದೇಹಾತುರದಲಡವಿಯೊ
ಳನ್ಯರನು ಸಂಹರಿಸುತಿರುತಿರೆ
ನಿನ್ನ ನಾಮದೊಳಧಿಕರವೆರಡಕ್ಷರವ ಬಣ್ಣಿಸುತ
ಧನ್ಯನಾದನು ಮುನಿಕುಲದ ಸಂ
ಪನ್ನನಾದನು ನೀನೊಲಿದ ಬಳಿ
ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ ।೪೨।

ನಿನ್ನ ಸತಿಗಳುಪಿದ ದುರಾತ್ಮನ
ಬೆನ್ನಿನಲಿ ಬಂದವನ ಕರುಣದಿ
ಮನ್ನಿಸಿದ ಕಾರಣ ದಯಾಪರ ಮೂರ್ತಿಯೆಂದೆನುತ
ನಿನ್ನ ಭಜಿಸಿದ ಸಾರ್ವಭೌಮರಿ
ಗಿನ್ನು ಇಹಪರವುಂಟೆ ? ಸದ್ಗುಣ
ರನ್ನ ಸಿರಿಸಂಪನ್ನ ರಕ್ಷಿಸು ನಮ್ಮನನವರತ ।೪೩।

ವೀರ ರಾವಣನೊಡನೆ ಹೋರಿದ
ವೀರರಗ್ಗದ ಕಪಿಗಳವರೊಳು
ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲಿ
ಸೇರಿಸಿದೆ ನಿನ್ನಂತೆ ಕೊಡುವ ಉ

ದಾರಿ ಯಾವನು ತ್ರಿಜಗದೊಳಗಾ
ಕಾರಣದಿ ನಂಬಿದೆನು ರಕ್ಷಿಸು ನಮ್ಮನನವರತ ।೪೪।

ಶಿವಶಿವಾ ನೀ ಮಾಡಿದುಪಕಾ
ರವನು ಮರೆತವರುಂಟೆ ಪಾಪದಿ
ನವೆದಜಾಮಿಳಗೊಲಿದು ಪ್ರಾಣವಿಯೋಗಕಾಲದಲಿ
ಜವನವರ ಕಯ್ಗೊಪ್ಪಿಸದೆ ಕಾ
ಯ್ದವನು ನೀ ಮಾಧವನು ಮಿಕ್ಕಾ
ದವರಿಗುಂಟೇ ಕರುಣ ರಕ್ಷಿಸು ನಮ್ಮನನವರತ ।೪೫।

ಹೆತ್ತ ಮಗಳನು ಮದುವೆಯಾದವ
ನುತ್ತಮನು ಗುರುಪತ್ನಿಗಳುಪಿದ
ಚಿತ್ತಜನು ಮಾವನ ಕೃತಘ್ನನು ನಿನಗೆ ಮೈದುನನು
ಹೊತ್ತು ತಪ್ಪಿಸಿ ಕಾಮದಲಿ ಮುನಿ
ಪೋತ್ತಮನ ಮಡದಿಯನು ನೆರೆದವ
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ ।೪೬।

ಇಲ್ಲಿಹನು ಅಲ್ಲಿಲ್ಲವೆಂಬೀ
ಸೊಲ್ಲು ಸಲ್ಲದು ಹೊರಗೊಳಗೆ ನೀ
ನಲ್ಲದಿಲ್ಲನ್ಯತ್ರವೆಂಬುದನೆಲ್ಲ ಕೆಲಕೆಲರು
ಬಲ್ಲರಿಳೆಯೊಳು ಭಾಗವತರಾ
ದೆಲ್ಲರಿಗೆ ವಂದಿಸದ ಕುಜನರಿ
ಗಿಲ್ಲ ಸದ್ಗತಿ ನೋಡು ರಕ್ಷಿಸು ನಮ್ಮನನವರತ ।೪೭।

ಸಿರಿಯ ಸಂಪತ್ತಿನಲಿ ನೀ ಮೈ
ಮರೆದು ಮದಗರ್ವದಲಿ ದೀನರ
ಕರುಣದಿಂದೀಕ್ಷಿಸದೆ ಕಡೆಗಣ್ಣಿಂದ ನೋಡುವರೆ
ಹರ ಹರ ಅನಾಥರನು ಪಾಲಿಸಿ

ವರವ ಕೊಡುವ ಉದಾರಿಯೆಂಬೀ
ಬಿರುದ ಬಿಡುವರೆ ತಂದೆ ರಕ್ಷಿಸು ನಮ್ಮನನವರತ ।೪೮।

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ ।೪೯।

ತರಳತನದಲಿ ಕೆಲವು ದಿನ ಉರು
ಭರದ ಗರ್ವತಿದಿ ಕೆಲವು ದಿನ ಮೈ
ಮರೆದು ನಿಮ್ಮಡಿಗೆರಗದಾದೆನು ವಿಷಯ ಕೇಳಿಯಲಿ
ನರಕಭಾಜನನಾಗಿ ಕಾಮಾ
ತುರದಿ ಪರಧನ ಪರಸತಿಗೆ ಮನ
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ ।೫೦।

ಮರೆದೆನಭ್ಯುದಯದಲಿ ನಿಮ್ಮನು
ಮರೆಯೆನಾಪತ್ತಿನಲಿ ಪೊರೆಯೆಂ
ದೊರೆಯುವೆನು ಮನಮೇಕಭಾವದೊಳಿಲ್ಲ ನಿಮ್ಮಡಿಯ
ಮರೆದು ಬಾಹಿರನಾದವನ ನೀ
ಮರೆವರೇ ಹಸು ತನ್ನ ಕಂದನ
ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ ।೫೧।

ಧಾರಿಣಿಗೆ ವರ ಚಕ್ರವರ್ತಿಗ
ಳಾರು ಮಂದಿ ನೃಪಾಲಕರು ಹದಿ
ನಾರು ಮಂದಿಯು ಧರಣಿಯನು ಮುನ್ನಾಳ್ದ ನೃಪರೆನಿತೋ
ವೀರರನು ಮೆಚ್ಚಿದಳೆ ಧರಣೀ

ನಾರಿ ಬಹು ಮೋಹದೊಳು ನಿನ್ನನು
ಸೇರಿಯೋಲಯಿಸುವಳು ರಕ್ಷಿಸು ನಮ್ಮನನವರತ ।೫೨।

ಭಾರಕರ್ತನು ನೀನು ಬಹು ಸಂ
ಸಾರಿಯೆಂಬುದ ನಿಗಮತತಿ ಕೈ
ವಾರಿಸುತ್ತಿದೆ ದಿವಿಜ ಮನುಜ ಭುಜಂಗದೊಳಗಿನ್ನು
ಆರಿಗುಂಟು ಸ್ವತಂತ್ರ ನಿನ್ನಂ
ತಾರು ಮುಕ್ತಿಯನೀವ ಸದ್ಗುರು
ವಾರು ಜಗದಧ್ಯಕ್ಷ ರಕ್ಷಿಸು ನಮ್ಮನನವರತ ।೫೩।

ಗತಿವಿಹೀನರಿಗಾರು ನೀನೇ
ಗತಿಕಣಾ ಪತಿಕರಿಸಿಕೊಂಡು ಸ
ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ
ಶ್ರುತಿವಚನವಾಡುವುದು ಶರಣಾ
ಗತರ ಸೇವಕನೆಂದು ನಿನ್ನನು
ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ ।೫೪।

ಈಗಲೋ ಈ ದೇಹವಿನ್ನಾ
ವಾಗಲೋ ನಿಜವಲ್ಲವೆಂಬುದ
ನೀಗ ತಿಳಿಯದೆ ಮಡದಿ ಮನೆ ಮನೆವಾರ್ತೆಯೆಂದೆಂಬ
ರಾಗಲೋಭದಿ ಮುಳುಗಿ ಮುಂದಣ
ತಾಗುಬಾಗುಗಳರಿಯೆ ನಿನ್ನ ಸ
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ।೫೫।

ಮಾಂಸ ರಕ್ತದ ಮಡುವಿನಲಿ ನವ
ಮಾಸ ಜನನಿಯ ಜಠರದೊಳಗಿರು
ವಾ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು
ನೀ ಸಲಹಿದವನಲ್ಲವೇ ಕರು

ಣಾಸಮುದ್ರನು ನೀನಿರಲು ಕಮ
ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ।೫೬।

ಬಲು ಮೃಗವು ಮರ ಪಕ್ಷಿ ಕೀಟಕ
ಜಲಚರೌಘದಿ ಜನಿಸಿದೆನು ಕೋ
ಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು
ಕೊಲಿಸದಿರು ಯಮನಿಂದ ಮುರಹರ
ಒಲಿದು ನಿನ್ನನು ಭಜಿಸುವವರಿಗೆ
ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ।೫೭।

ಪಂಚಭೂತದ ಕಾಯದೊಳು ನೀ
ವಂಚಿಸದೆ ಇರುತಿರಲು ಪೂರ್ವದ
ಸಂಚಿತದ ಫಲವೆನ್ನಲೇಕಿದು ಮರುಳತನದಿಂದ
ಮಿಂಚುವವರಿನ್ನುಂಟೆ ತಿಳಿಯೆ ಪ್ರ
ಪಂಚವೆಲ್ಲಕೆ ತಪ್ಪಿದವ ನೀ
ಕೊಂಚಗಾರನೆ ಕೃಷ್ಣ ರಕ್ಷಿಸು ನಮ್ಮನನವರತ ।೫೮।

ಹಲವು ಕರ್ಮಗಳಿಂದ ಮೂತ್ರದ
ಬಿಲಗಳಲಿ ಸಂಚರಿಸಿ ಪದವಿಯ
ಫಲವ ಕಾಣದೆ ಹೊಲಬುದಪ್ಪಿದೆನೆನ್ನ ದೇಹದಲಿ
ಒಲಿದು ನೀನಿರೆ ನಿನ್ನ ಸಲುಗೆಯ
ಬಲುಮೆಯಲಿ ಬರಸೆಳೆವೆ ಮುಕುತಿಯ
ಲಲನೆಯನೆ ತಳುವಿಲ್ಲ ರಕ್ಷಿಸು ನಮ್ಮನನವರತ ।೫೯।

ಎತ್ತಿದೆನು ನಾನಾ ಶರೀರವ
ಹೊತ್ತು ಹೊತ್ತಲಸಿದೆನು ಸಲೆ ಬೇ
ಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು
ಸತ್ತು ಹುಟ್ಟುವ ಹುಟ್ಟಿ ಹಿಂಗುವ

ಸುತ್ತು ತೊಡಕನು ಮಾಣಿಸೆಲೆ ಪುರು
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ।೬೦।

ಇಂದು ಈ ಜನ್ಮದಲಿ ನೀನೇ
ಬಂಧು ಹಿಂದಣ ಜನ್ಮದಲಿ ಬಳಿ
ಸಂದು ಮುಂದಣ ಜನ್ಮಕಧಿಪತಿಯಾಗಿ ಇರುತಿರಲು
ಎಂದಿಗೂ ತನಗಿಲ್ಲ ತನು ಸಂ
ಬಂಧ ನಿನ್ನದು ಎನಗೆ ನೀ ಗತಿ
ಯೆಂದು ಬಿನ್ನವಿಸಿದೆನು ರಕ್ಷಿಸು ನಮ್ಮನನವರತ ।೬೧।

ಗಣನೆಯಿಲ್ಲದ ಜನನಿಯರು ಮೊಲೆ
ಯುಣಿಸಲಾ ಪಯಬಿಂದುಗಳನದ
ನೆಣಿಸಲಳವೇ ಸಪ್ತಸಾಗರಕಧಿಕವೆನಿಸಿಹುದು
ಬಣಗು ಕಮಲಜನದಕೆ ತಾನೇ
ಮಣೆಯಗಾರನು ಈತ ಮಾಡಿದ
ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ ।೬೨।

ಲೇಸ ಕಾಣೆನು ಜನನ ಮರಣದಿ
ಗಾಸಿಯಾದೆನು ನೊಂದೆನಕಟಾ
ಲೇಸೆನಿಸಿ ನೋಡಲು ಪರಾಪರವಸ್ತು ನೀನಾಗಿ
ನೀ ಸಲಹುವವನಲ್ಲವೇ ಕರು
ಣಾಸಮುದ್ರನು ನೀನಿರಲು ಕಮ
ಲಾಸನನ ಹಂಗೇನು ರಕ್ಷಿಸು ನಮ್ಮನನವರತ ।೬೩।

ಕಾಪುರುಷರೈದಾರು ಮಂದಿ ಸ
ಮೀಪದಲಿ ಕಾಡುವರು ಎನ್ನನು
ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ
ಶ್ರೀ ಪದಾಬ್ಜದ ಸೇವೆಯಲಿ ನೆರೆ

ಪಾಪವನು ಪರಿಹರಿಸೆ ನೀ ನಿಜ
ರೂಪಿನಲಿ ಬಂದೊಲಿದು ರಕ್ಷಿಸು ನಮ್ಮನನವರತ ।೭೪।

ಐದು ತತ್ತ್ವಗಳಾದವೊಂದ
ಕ್ಕೈದು ಕಡೆಯಲಿ ತತ್ತ್ವವಿಪ್ಪ
ತ್ತೈದು ಕೂಡಿದ ತನುವಿನಲಿ ವಂಚಿಸದೆ ನೀನಿರಲು
ಭೇದಿಸನೆ ಜೀವಾತ್ಮ ತಾ ಸಂ
ಪಾದಿಸಿದ ಸಂಚಿತದ ಕರ್ಮವ
ನಾದರಿಸಿ ಕಯ್ಗೊಂಡು ರಕ್ಷಿಸು ನಮ್ಮನನವರತ ।೭೫।

ಎಂಟು ಗೇಣಿನ ದೇಹ ರೋಮಗ
ಳೆಂಟು ಕೋಟಿಯ ಕೀಲ್ಗಳಿರುವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು
ನೆಂಟ ನೀನಿರ್ದಗಲಿದಡೆ ಒಣ
ಹೆಂಟಿಯಲಿ ಮುಚ್ಚುವರು ದೇಹದ
ಲುಂಟೆ ಫಲ ಪುರುಷಾರ್ಥ ರಕ್ಷಿಸು ನಮ್ಮನನವರತ ।೭೬।

ಸ್ನಾನ ಸಂಧ್ಯಾ ಧ್ಯಾನ ಜಪ ತಪ
ದಾನ ಧರ್ಮ ಪರೋಪಕಾರ ವಿ
ಹೀನ ಕರ್ಮದೊಳಿರುವೆನಲ್ಲದೆ ಬೇರೆ ಗತಿಯುಂಟೆ
ಏನು ಮಾಡಿದಡೇನು ಮುಕ್ತಿ
ಜ್ಞಾನವಿಲ್ಲದಡಿಲ್ಲ ಭಕ್ತಿಗೆ
ನೀನೆ ಕಾರಣನಾಗಿ ರಕ್ಷಿಸು ನಮ್ಮನನವರತ ।೭೭।

ಕೋಪವೆಂಬುದು ತನುವಿನಲಿ ನೆರೆ
ಪಾಪ ಪಾತಕದಿಂದ ನರಕದ
ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೆ
ರಾಪು ಮಾಡದೆ ಬಿಡನು ಯಮನು ನಿ

ರಪರಾಧಿಯು ನೋಡಿ ಕೀರ್ತಿಕ
ಲಾಪವನು ನೀ ಕಾಯ್ದು ರಕ್ಷಿಸು ನಮ್ಮನನವರತ ।೬೮।

ನಿನ್ನ ಸೂತ್ರದೊಳಾಡುವುವು ಚೈ
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮುಗ್ಗುವುವು ಹೂಹೆಗಳು
ಇನ್ನು ನಮಗೆ ಸ್ವತಂತ್ರವೆಲ್ಲಿಯ
ದನ್ಯ ಕರ್ಮ ಸುಕರ್ಮವೆಲ್ಲವ
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ।೬೯।

ಒಡೆಯ ನೀನೆಂದರಿತು ನಾ ನಿ
ನ್ನಡಿಯ ಭಜಿಸದೆ ದುರುಳನಾದೆನು
ಮಡದಿ ಮಕ್ಕಳ ಮೋಹದಲಿ ಮನ ಸಿಲುಕುತಡಿಗಡಿಗೆ
ಮಡದಿ ಯಾರೀ ಮಕ್ಕಳಾರೀ
ಒಡಲಿಗೊಡೆಯನು ನೀನು ನೀ ಕೈ
ವಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ ।೭೦।

ಪಂಟಿಸಿದ ಮದಮುಖರು ಕೆಲಕೆಲ
ರುಂಟು ರಿಪುಗಳು ದಂಟಿಸುತ ಬಲು
ಕಂಟಕದಿ ಕಾಡುವರು ಕಾಯ್ದೈ ಕಲುಷ ಸಂಹಾರ
ಬಂಟನಲ್ಲವೆ ನಾನು ದೀನರ
ನಂಟನಲ್ಲವೆ ನೀನು ನಿನ್ನೊಳ
ಗುಂಟೆ ನಿರ್ದಯ ನೋಡಿ ರಕ್ಷಿಸು ನಮ್ಮನನವರತ ।೭೧।

ದಂಡಧರನುಪಟಳದಿ ಮಿಗೆ ಮುಂ
ಕೊಂಡು ಮೊರೆಯುಗುವವರ ಕಾಣೆನು
ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ
ಖಂಡಪರಶುವು ರುದ್ರಭೂಮಿಯೊ

ಳಂಡಲೆದು ತಿರುಗುವನು ನೀನು
ದ್ದಂಡ ದೇವರ ದೇವ ರಕ್ಷಿಸು ನಮ್ಮನನವರತ ।೭೨।

ಶಕ್ತಿಯೆಂಬುದು ಮಾಯೆ ಮಾಯಾ
ಶಕ್ತಿಯದು ತನುವಿನಲಿ ನೀ ನಿಜ
ಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು
ಯುಕ್ತಿಯೊಳಗಿದನರಿತು ಮನದ ವಿ
ರಕ್ತಿಯಲಿ ಭಜಿಸುವರೆ ಮುಕ್ತಿಗೆ
ಭಕ್ತಿಯೇ ಕಾರಣವು ರಕ್ಷಿಸು ನಮ್ಮನನವರತ ।೭೩।

ಮೂರು ಗುಣ ಮೊಳೆದೋರಿತದರೊಳು
ಮೂರು ಮೂರ್ತಿಗಳಾಗಿ ರಂಜಿಸಿ
ತೋರಿ ಸೃಷ್ಟಿ ಸ್ಥಿತಿ ಲಯಂಗಳ ರಚಿಸಿ ವಿಲಯದಲಿ
ಮೂರು ರೂಪೊಂದಾಗಿ ಪ್ರಳಯದ
ವಾರಿಯಲಿ ವಟಪತ್ರಶಯನದಿ
ಸೇರಿದವ ನೀನೀಗ ರಕ್ಷಿಸು ನಮ್ಮನನವರತ ।೭೪।

ನೀರ ಮೇಲಣ ಗುಳ್ಳೆಯಂದದಿ
ತೋರಿಯಡಗುವ ದೇಹವೀ ಸಂ
ಸಾರ ಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ
ತೋರಿಸಚಲಾನಂದ ಪದವಿಯ
ಸೇರಿಸಕಟಾ ನಿನ್ನವೋಲ್ ನಮ
ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ ।೭೫।

ಹೊದ್ದಿ ನಿಲುವುದೆ ದರ್ಪಣದ ಮೇ
ಲುದ್ದುರುಳಿ ಬೀಳ್ವಂತೆ ನಿಮಿಷದಿ
ಬಿದ್ದು ಹೋಗುವ ಕಾಯವೀ ತನುವೆಂಬ ಪಾಶದಲಿ
ಬದ್ಧನಾದೆನು ಮಮತೆಯಲಿ ನೀ

ಏನ ಹೇಳುವೆನರಸ ಹೊಕ್ಕರು
ಕಾನನವ ಬಳಸಿದರು ಮೃಗತತಿ
ಯಾನಲಾಪುದೆ ತೆಗೆದು ಹಾಯ್ದುದು ಭಟರ ಘಲ್ಲಣೆಗೆ
ಆನೆಗಳ ಕೆಡಹಿದರು ಬಲಸಂ
ಧಾನದಲಿ ಹುಲಿ ಕರಡಿ ಮುಸು ಮೊಲ
ವಾನರಾದಿ ಸಮಸ್ತ ಮೃಗಗಳ ತರುಬಿ ಕೆಡಹಿದರು ।೧೨।

ಹತ್ತಿ ತದ್ಗಿರಿಶಿಖರವನು ಮರ
ಮೊತ್ತದಲಿ ಬಲೆಗಳನು ಹಾಯ್ಕಿದ
ರೊತ್ತಿ ಸೋಹಿದರೊಂದು ಘನತರ ಸಿಂಹವಬ್ಬರಿಸಿ
ಹೊತ್ತ ಕೋಪದಿ ಸೈನ್ಯವನು ಮುರಿ
ದೊತ್ತಿ ಬರುತಿರೆ ಕಂಡು ನೃಪ ಬೆಂ
ಬತ್ತಿ ಕಡಿದನು ಮೃಗಪತಿಯ ವನವೆಲ್ಲ ಬೆರಗಾಗೆ ।೧೩।

ನಿಲಿಸಿ ಬೇಂಟೆಯನಲ್ಲಿ ಬಳಲಿದ
ಬಲ ಸಮೇತದಿ ಬಂದು ತತ್ಪುರ
ವಳಯದುದ್ಯಾನವನು ಹೊಕ್ಕನು ಬಲಿದ ವಿರಹದಲಿ
ನಲವು ಹಿಂಗಿದ ಮನದ ದುಗುಡದೊ
ಳಿಳಿದು ತೊಳೆದನು ಜಾನು ಜಂಘೆಯ
ಕೊಳದಿ ಪರಿಹೃತನಾಗಿ ಸಂಚರಿಸಿದನು ವನದೊಳಗೆ ।೧೪।

ಆ ಕೊಳದ ತೀರದಲಿ ತರುಗಳ
ನೇಕವವದರೊಳಗೊಂದು ಠಾವಿನೊ
ಳೇಕ ವೃಕ್ಷದ ನೆಳಲಿನಲಿ ನವಕುಸುಮದಿಕ್ಕೆಯಲಿ
ಆ ಕಮಲಜನ ತುರಗ ನಿದ್ರಾ
ವ್ಯಾಕುಲದಿ ಮಲಗಿರಲು ಕಂಡ ಶು
ಭಾಕರೋನ್ನತ ಶುಭ್ರತೇಜದ ರಾಜಹಂಸವನು ।೧೫।

ಅರುಣಮಯದಾನನದ ಪದಯುಗ
ಗರಿಗಳುನ್ನತ ಧವಳ ದೇಹದ
ಪರಮ ತೇಜದೊಳೆಸೆವ ಹಂಸೆಯ ಕಂಡು ಬೆರಗಾಗಿ
ಹರಹರಾ ! ಇದರಾಯತವ ಮುರ
ಹರನು ತಾನೇ ಬಲ್ಲನೆನುತ
ಕ್ಕರದಿ ಮೆಲ್ಲನೆ ಕರವ ನೀಡುತ ಪಿಡಿದ ಹಂಸವನು ।೧೬।

ಒದರಿ ಕುಣಿಯಲು ಹಸ್ತದೊಳಗದ
ಕದಲದಂತಿರೆ ಪಿಡಿಯಲರಸನ
ವದನಕಮಲವ ನೋಡಿ ಹೆದರಿತು ಬಹಳ ಭೀತಿಯಲಿ
ಹೃದಯ ಕರಗುವ ಮಾತನೆಂದುದು
ಮದಕರಿಗೆ ನೊರಜಂತರವೆ ಕೈ
ಸದರದವರನು ಕೊಲುವುದೇನರಿದೆಂದುದಾ ಪಕ್ಷಿ ।೧೭।

ಕರಿಗಳನು ಮುರಿದಿಡುವ ಸಿಂಹಕೆ
ನರಿಗಳಿದಿರೇ ತಾನು ನಿನಗಂ
ತರವೆ ಸಾಕಂತಿರಲಿ ಕಂಡವರೆಲ್ಲ ಕಡುನಗರೆ
ಅರಿಭಯಂಕರ ಶತ್ರುಗಳ ಸಂ
ಹರಿಸುವುದು ನೃಪನೀತಿ ನಿನಗಿದು
ತರವೆ ಬಿಡು ಪರಹಿಂಸೆ ದೋಷವಿದೆಂದುದಾ ಪಕ್ಷಿ ।೧೮।

ಬಡಬಗೌತಣವಿಕ್ಕುವೆಡೆಯೊ
ಕ್ಕುಡಿತೆ ಜಲವೇ ಮಂಜು ಸುರಿಯ
ಲ್ಕೊಡನೆ ಕೆರೆ ತುಂಬುವುದೆ ನೃಪ ನೀನೆನ್ನ ಭುಂಜಿಸಲು
ಒಡಲಿಗಾಪ್ಯಾಯನವೆ ಕೇಳೆಲೆ
ಪೊಡವಿಪತಿ ಬಿಡು ನನ್ನ ಮನೆಯಲಿ
ಮಡದಿ ಸುತರುಮ್ಮಳವ ನೋಡೆಂದೊರಲಿತಾ ಪಕ್ಷಿ ।೧೯।

ಮರನ ಹುತ್ತವನೇರಿದರ ಸಂ
ಗರದಿ ದೈನ್ಯಂಬಡುವರಾಯುಧ
ಮುರಿದ ಬರಿಗೈಯವರ ನೀರೊಳು ಹೊಕ್ಕು ನಿಂದವರ
ತರುಣಿಯರ ಮರೆಗೊಂಡವರ ನಿ
ಬ್ಬರದಿ ಮುರಿದೋಡುವರ ನಿದ್ರಾ
ಭರದೊಳಿರ್ದ್ದರ ಕೊಲುವುದುಚಿತವೆ ಎಂದುದಾ ಪಕ್ಷಿ ।೨೦।

ನುಡಿಗೆ ನಾಚಿದನರಸ ಹಂಸದ
ನಡವಳಿಗೆ ಮೆಚ್ಚಿದನು ನಿನ್ನನು
ಹಿಡಿದು ಕೊಲುವವನಲ್ಲ ನಿನ್ನಾಲಯಕೆ ಹೋಗೆಂದು
ಬಿಡಲು ರೆಕ್ಕೆಯ ಕೊಡಹಿ ಹಾರಿತು
ಒಡನೆ ಮರಳಿತು ಧರೆಗೆ ರಾಯನ
ಕಡೆಗೆ ಮಂಡಿಸಿ ಕುಳಿತು ನುಡಿದುದು ನೃಪಗೆ ವಿನಯದಲಿ ।೨೧।

ಭೂರಮಣ ಕೇಳಸುವ ಕಾಯ್ದುಪ
ಕಾರಮಾಡಿದೆ ನೀನು ನಿನಗುಪ
ಕಾರ ಮಾಡುವೆನೆನಲದೇನೆಂದರಸ ಬೆಸಗೊಂಡ
ಸಾರಹೃದಯನೆ ಚಿತ್ತವಿಸು ವಿ
ಸ್ತಾರದಿಂದರುಹುವೆನು ಭುವನದೊ
ಳಾರಿಗುಂಟೀ ಪರಮಸುಕೃತಗಳೆಂದುದಾ ಪಕ್ಷಿ ।೨೨।

ಅರಸ ಕೇಳತಿದೂರದಲಿ ಸುರ
ಪುರವ ಪೋಲ್ವ ವಿದರ್ಭಪಟ್ಟಣ
ದರಸು ಭೀಮನೃಪಾಲನಾತನ ತನುಜೆ ದಮಯಂತಿ
ಪರಮ ಪುಣ್ಯಾಂಗನೆ ಮಹಾಸುಂ
ದರಿ ನಿಪುಣೆ ಗಜಗಮನೆ ನಯಗುಣ
ಭರಿತೆ ಸೊಬಗಿನ ಸೋನೆ ತಾನಿಹಳಲ್ಲಿ ವನಜಾಕ್ಷಿ ।೨೩।

ಪೊಗಳಲಳವೇ ಸತಿಯ ಚೆಲುವಿನ
ಬಗೆಯ ಭಾವಿಸಿ ನೋಡಲತಿ ಸೋ
ಜಿಗವು ನೆರೆ ದಮಯಂತಿ ಯೌವನ ರೂಪರೇಖೆಯಲಿ
ನಗೆಮೊಗದ ಪೊಂಬೊಗರ ಮಿಂಚಿನ
ಬೊಗಸೆಗಂಗಳ ಸೆಳೆನಡುವ ಸೆ
ಳ್ಳುಗುರ ಬೆಡಗಿನ ಕಾಂತೆ ರಂಜಿಸುತಿರ್ಪಳಾ ಪುರದಿ ।೨೪।

ಕ್ಷಿತಿಯೊಳಿಹ ಸತಿಯರಲಿ ಅಮರಾ
ವತಿಯೊಳಿಹ ಪೆಣ್ಗಳಲಿ ಮೇಣಾ
ವಿತಳದಲ್ಲಿಹ ನಾರಿಯರಲೀಕ್ಷಿಸಿದಡಾ ಸತಿಗೆ
ಪ್ರತಿಯ ಕಾಣೆನು ರೂಪಿನಲಿ ನೀ
ನತಿ ಚೆಲುವ ನಿನಗವಳು ಪಾಸಟಿ
ಸತಿಗೆ ನೀನೇ ರಮಣನಲ್ಲದೆ ಕಾಣೆನಿತರರನು ।೨೫।

ಅವಳು ನಿನಗೊಲಿವಂತೆ ಮಾಡುವೆ
ಶಿವನ ಕೃಪೆ ನಿನಗುಂಟು ನಮ್ಮಲಿ
ಸವಡಿನುಡಿಯಿಲ್ಲರಸ ನಂಬುವುದೆನ್ನ ನೀನೆನಲು
ಅವನಿಪತಿ ನಸುನಗುತ ಹಂಸೆಯ
ಸವಿನುಡಿಗೆ ಮನಸೋತು ವಿರಹದ
ತವಕದಲಿ ಹೇವರಿಸಿ ನುಡಿದನು ನಳನು ಖಗಪತಿಗೆ ।೨೬।

ಮನಸಿಜನ ಶರಹತಿಗೆ ನೊಂದೆನು
ತನುವ ಸೈರಿಸಲಾರೆನೆನಗಾ
ವನಿತೆಯನು ಸೇರಿಸುತ ಸಲಹೆನ್ನಸುವ ಕರುಣದಲಿ
ಎನಗೆ ನೀನೇ ಪರಮಬಾಂಧವ
ಮನಕೆ ಹರುಷವ ಮಾಡು ನೀನೀ
ಬನಕೆ ಬಹ ಪರಿಯಂತ ತಾನಿಲ್ಲಿಹೆನು ಹೋಗೆಂದ ।೨೭।

ಕೇಳು ಧರ್ಮಜ ನಳನೃಪಾಲನ
ಬೀಳುಕೊಂಡು ಸರಾಗದಿಂದ ವ
ನಾಲಯವ ಹೊರವಂಟು ತೆರಳಿತು ವಾಯುವೇಗದಲಿ
ಆ ಲತಾಂಗಿಯ ಪತಿಯ ಕೀರ್ತಿ ವಿ
ಶಾಲವಾದಂದದಲಿ ರಾಜಮ
ರಾಳ ಗಗನಕೆ ಹಾಯ್ದು ಕಂಡಿಳಿತಂದುದಾ ಪುರಕೆ ।೨೮।

ಕನಕಮಣಿ ನಿರ್ಮಿತದ ಸೌಧದಿ
ಜನನಿಕರ ಸಂದೋಹದಲಿ ಉಪ
ವನದ ವೀಧಿಗಳೆಸೆದು ಮೆರೆವ ವಿದರ್ಭ ಪಟ್ಟಣಕೆ
ಮನವೊಲಿದು ನಿಜಬಳಗ ಸಹಿತಂ
ಗನೆಯರೋಲಗದಲ್ಲಿ ಮದನನ
ಮೊನೆಯಲಗಿನಲಿ ಬಳಲ್ವ ಸತಿಯನು ಕಂಡುದಾ ಹಂಸೆ ।೨೯।

ನೀಲಮಣಿ ಭಿತ್ತಿಗಳ ವಜ್ರದ
ಸಾಲುಗಂಬದ ಪಚ್ಚೆ ಹಲಗೆಯ
ಮೇಲೆ ಮುತ್ತಿನ ಲೋವೆ ಹವಳದಿ ಕಡೆದ ಬೋದಿಗೆಯ
ಸಾಲ ಮಣಿಮಂಟಪದಿ ಮಂಚದ
ಮೇಲೆ ಮಂಡಿಸಿ ನಳನ ಚಿಂತೆಯ
ತಾಳಿದಂಗನೆ ಸತಿಯರೊಡನಿರೆ ಕಂಡುದಾ ಹಂಸೆ ।೩೦।

ಪೆರೆನೊಸಲ ಕತ್ತುರಿಯ ತಿಲಕದ
ಕೊರಳ ಮುತ್ತಿನ ಹಾರ ರತ್ನದ
ಬೆರಳ ಮುದ್ರಿಕೆಗಳ ಸುವರ್ಣದ ಕರದ ಕಂಕಣದ
ಪರಿಪರಿಯ ನಿರಿಯುಡಿಗೆಗಳ ನೂ
ಪುರದ ತೊಡರಿನ ದೇಸಿ ಮಿಗೆ ಬಳ
ಸಿರಲು ತರುಣಿಯರಂದು ಸತಿಯನು ಕಂಡುದಾ ಹಂಸೆ ।೩೧।

ತಳಿತ ಮೇಘದಿ ಹೊಳೆವ ಮಿಂಚಿನ
ಬಳಗವೆನೆ ಹಂಸೆಗಳು ನಭದಿಂ
ದಿಳೆಗಿಳಿದು ಸತಿಯರ ಸಭಾಮಂಡಲದಿ ಕುಳ್ಳಿರಲು
ನಳಿನಲೋಚನೆ ಕಂಡು ಪಕ್ಷಿಯ
ಲಲನೆಯರ ಮೊಗ ನೋಡಿ ಹಂಸದ
ಚೆಲುವ ಬಣ್ಣಿಸಿ ಹಿಡಿಯಬೇಕೆಂದೆನುತ ಗಮಿಸಿದಳು ।೩೨।

ಮೆಲ್ಲಮೆಲ್ಲನೆ ಅಡಿಯಿಡುತ ಕರ
ಪಲ್ಲವವ ಚಾಚಿದಳು ನೂಪುರ
ಘಲ್ಲುಘಲಿರೆನೆ ಅತ್ತಲಿತ್ತಲು ಸಾರುತಾ ಹಂಸೆ
ನಿಲ್ಲದಂಗೈಸುತ್ತ ಬರಲ
ಲ್ಲಲ್ಲಿ ಎಡರಿತು ಕುಸುಮಮಯ ನವ
ಮಲ್ಲಿಗೆಯ ಬನದಲ್ಲಿ ಹೊಕ್ಕುದು ಹೊದರ ಹೊಸಮೆಳೆಯ ।೩೩।

ಕೆಳದಿಯರ ಕೆಲಕೊತ್ತಿ ತಾನೇ
ಮೆಳೆಯ ಹೊಕ್ಕಳು ಬಾಗೆ ಸೆಳೆ ನಡು
ಬಳುಕೆ ಕುಚಭಾರದಲಿ ಮೇಲುದು ಜಾರೆ ಮುಡಿ ಕೆದರೆ
ಜಲಜಮುಖಿ ಬೆಮರಿಡಲು ಕೊರಳಿನ
ಲಲಿತದೇಕಾವಳಿಗಳಲ್ಲಾ
ಡಲು ಸೆರಗನಳವಡಿಸಿ ನಿಂದಳು ಬಳಲಿ ಬಿಸುಸುಯ್ದು ।೩೪।

ಎಲೆ ಸರೋರುಹಗಂಧಿ ನೀನೆನ
ಗೊಲಿದು ಮನದಲಿ ಹಿಡಿವೆನೆಂಬೀ
ಚಲವಿದೇತಕೆ ಮಾಣು ನಾವಂಬರದ ಪಕ್ಷಿಗಳು
ನಿಲುಕುವವರಾವಲ್ಲ ಬರಿದೇ
ಬಳಲದಿರು ತಾ ಬಂದ ಪರಿಯನು
ತಿಳುಹುವೆನು ನಿನಗೆಲ್ಲವನು ಕೇಳೆಂದುದಾ ಪಕ್ಷಿ ।೩೫।

ನಳಿನಮುಖಿ ನಳಚಕ್ರವರ್ತಿಯ
ಬಳಿಯ ವಾಹನವಾಗಿ ತಾನಿಹೆ
ನೊಲಿದು ಸಲಹುವನೆನ್ನ ಪರಮ ಪ್ರೀತಿವಚನದಲಿ
ಇಳೆಗೆ ನಳಕೂಬರ ಜಯಂತರ
ಚೆಲುವ ಮದನನ ರೂಪರೇಖೆಯ
ಹಳಿವುದಾ ನಳನೃಪನ ನಿಜಸೌಂದರ್ಯದಾಟೋಪ ।೩೬।

ನಿನ್ನ ರೂಪಿಗೆ ಸಲುವುದೌ ನಳ
ನುನ್ನತದ ಸೌಂದರ್ಯ ಜಗದೊಳ
ಗಿನ್ನು ನಾ ಸರಿಗಾಣೆ ನಿಮಗೀರ್ವರಿಗೆ ಸಮನಹುದು
ಎನ್ನಲಾ ನುಡಿಗೇಳಿ ಹಂಸೆಗೆ
ತನ್ನ ಶಿರವನು ಬಾಗಿ ಗುಣಸಂ
ಪನ್ನೆ ನುಡಿದಳು ನಾಚಿ ನಸುನಗೆಯಿಂದ ವಿನಯದಲಿ ।೩೭।

ಪರಮ ಗುಣನಿಧಿ ಪಕ್ಷಿ ಕೇಳ್ ಬಾ
ಹಿರನು ಪಾತಕಿ ಮದನನೆಲೆ ನಿ
ಷ್ಠುರದೊಳೆಸೆಯಲು ಪುಷ್ಪಬಾಣದಿ ನೊಂದುದೆನ್ನೊಡಲು
ಕರುಣರಸ ಧಾರೆಯಲಿ ತಾಪವ
ಪರಿಹರಿಸಬೇಕೆಂದು ನೀನಾ
ಧರಣಿಪತಿ ನಳನೃಪಗೆ ಬಿನ್ನೈಸೆಂದಳಿಂದುಮುಖಿ ।೩೮।

ಪರರ ದುಃಖವ ಪರಿಹರಿಸಿ ಮಿಗೆ
ಪರರಿಗುಪಕಾರಾರ್ಥವೆಸಗಲು
ಪರಮ ಪುಣ್ಯವಿದೆಂದು ಪೇಳ್ವರು ಪಿರಿಯರಾದವರು
ಪರಮ ಬಾಂಧವ ನೀನೆನಗೆ ಸ
ತ್ಕರಿಸು ವಿರಹದಿ ನೊಂದವಳ ಕರೆ
ಕರೆಗೆ ಗುರಿಮಾಡದಿರು ಸಲಹೆಂದಳು ಸರೋಜಮುಖಿ ।೩೯।

ಬಲಿದ ವಿರಹಾಗ್ನಿಯಲಿ ನೊಂದೆನು
ಬಳಲಿದೆನು ತನು ಬಾಡಿ ತಾಪದಿ
ನಲುವು ಹಿಂಗಿತು ಬವಣೆ ಹೆಚ್ಚಿತು ತ್ರಾಣವೆಳದಾಯ್ತು
ಹಲವು ಮಾತೇನಿನ್ನು ನಳನೃಪ
ತಿಲಕನೆನ್ನಯ ಪತಿಯಲಾ ಭೂ
ತಳದ ಪುರುಷರು ಪಿತನ ಸಮ ಕೇಳೆಂದಳಿಂದುಮುಖಿ ।೪೦।

ಅರಸ ಕೇಳಾ ಹಂಸೆ ತರುಣಿಯ
ಕರುಣದಳತೆಯ ಕಂಡು ತಾ ಬಂ
ದಿರುವ ಕಾರ್ಯದ ಹದನು ಲೇಸಾಯ್ತೆಂದು ಮನದೊಳಗೆ
ಹರುಷ ಮಿಗೆ ಕೊಂಡಾಡಿ ಸತಿಯನು
ಕರೆದು ನುಡಿದುದು ನಿನಗೆ ನಳಭೂ
ವರನ ಪತಿಯನು ಮಾಳ್ಪೆನಂಜದಿರೆಂದುದಾ ಹಂಸೆ ।೪೧।

ಅಂತರಂಗದ ಬುದ್ಧಿಯನು ದಮ
ಯಂತಿಗೆಲ್ಲವನರುಹಿ ತರುಣಿಯ
ಸಂತವಿಟ್ಟಲ್ಲಿಂದ ಕಳುಹಿಸಿಕೊಂಡು ಬೇಗದಲಿ
ಮುಂತಳರ್ದು ಮಿಗೆ ತನ್ನ ಬಾಂಧವ
ಸಂತತಿಯನೊಡಗೊಂಡು ನಿಷಧನ
ಚಿಂತೆಯನು ಪರಿಹರಿಸಬೇಕೆಂದೈದಿತಾ ಹಂಸೆ ।೪೨।

ಆಗ ನಳಭೂವರನ ದಕ್ಷಿಣ
ಭಾಗ ಭುಜನಯನಂಗಳದುರಿದು
ವಾಗ ಕೇಳಿದನಿದರ ಫಲವೇನೆಂದು ಭೂಸುರರ
ಭೋಗಸುಖದರ್ಶನದ ಫಲವಿಂ
ದೀಗಲಹುದೆನಲಾ ಸಮಯದಿ ಸ
ರಾಗದಲಿ ನಡೆತಂದುದಾ ನೃಪನೆಡೆಗೆ ಕಲಹಂಸೆ ।೪೩।

ಬಂದ ಹಂಸೆಯ ಕಂಡು ಮುಖಕಳೆ
ಯಿಂದಲರಿದನು ನೃಪತಿ ಮನದಲಿ
ಇಂದುಮುಖಿ ತನಗೊಲಿದ ಹದನಹುದೆಂದು ಹರುಷದಲಿ
ಮಂದಗಮನೆಯ ಕಂಡಿರೇ ಏ
ನೆಂದು ನುಡಿದಳು ಸತಿಯ ಬಗೆಯೇ
ನೆಂದು ಬೆಸಗೊಳೆ ನಗುತ ಬಳಿಕಿಂತೆಂದುದಾ ಪಕ್ಷಿ ।೪೪।

ಮಾನವಾಧಿಪ ಕೇಳು ಮನದನು
ಮಾನವನು ಬಿಡು ಗುಡಿಯ ಕಟ್ಟಿಸು
ನೀನೆಳಸಿದಿಷ್ಟಾರ್ಥಫಲ ಸಿದ್ಧಿಸಿದುದಿನ್ನೇನು
ಮಾನನಿಧಿ ನೀ ಮುನ್ನ ಮಾಡಿದ
ನೂನ ಸುಕೃತದ ಫಲವೊ ನಿನ್ನನೆ
ಧ್ಯಾನಿಸುವಳನವರತ ಮನ ಬೇರಿಲ್ಲವಾ ಸತಿಗೆ ।೪೫।

ಆ ತಳೋದರಿ ನಿನ್ನ ಮೇಲಣ
ಪ್ರೀತಿಯಿಂದೊಲಿದಂತರಂಗದಿ
ಕಾತರಿಸುತಿಹಳಂಗಜನ ಉಪಟಳದಿ ಕಡುನೊಂದು
ಧಾತುಗುಂದಿಹಳಾ ತರುಣಿ ಮನ
ಸೋತು ಹಂಬಲಿಸುವಳು ನಳನೃಪ
ನಾತನೇ ಪತಿಯೆಂದು ನಂಬಿಹೆನೆಂದಳಿಂದುಮುಖಿ ।೪೬।

ಎಲೆ ನೃಪತಿ ದಮಯಂತಿಯನು ನಿನ
ಗೊಲಿಸಿ ಬಂದೆನು ಭಾಷೆ ಸಂದುದು
ಲಲನೆಯನು ನೀ ಮದುವೆಯಾಗಿಂದೆನ್ನ ಕಳುಹೆನಲು
ಬಳಲಿದಿರಿ ನಮಗೋಸುಗವೆ ಬಲು
ಹಳುವದಲಿ ತೊಳಲಿದಿರಿ ಕಷ್ಟವ
ಬಳಸಿದಿರಿ ಸಾಕಿನ್ನು ಗಮಯಿಸಿಯೆಂದು ಬೀಳ್ಕೊಟ್ಟ ।೪೭।

ಕೇಳು ಪಾಂಡವತನಯ ರಾಜಮ
ರಾಳ ತೆರಳಿದುದತ್ತ ನಳಭೂ
ಪಾಲನಿತ್ತಲು ಬಂದು ಹೊಕ್ಕನು ತನ್ನ ನಗರಿಯನು
ಆಳುಮಂದಿಯ ಕಳುಹಿ ಮನದಿ ವಿ
ಶಾಲ ವಿರಹದ ತಾಪದಲಿ ಮಿಗೆ
ಕೇಳಮೇಳ ವಿನೋದ ವಿಭವವನುಳಿದನಾ ನೃಪತಿ ।೪೮।

ಅತ್ತಲಾ ದಮಯಂತಿ ನಳನೊಳು
ಚಿತ್ತವಿಟ್ಟಳು ನೃಪಗೆ ವಿರಹವು
ಹೊತ್ತಿತಾಕೆಯ ಮೇಲೆ ಇರ್ವರಿಗಾಯ್ತು ಸಂತಾಪ
ಚಿತ್ತಜನು ಪಾತಕನು ವಿರಹವ
ಹೊತ್ತಿಸಿದನಿಬ್ಬರಿಗೆ ಮದನನ
ಹೆತ್ತವನು ವರಪುರದರಸ ಚೆನ್ನಿಗರಾಯ ಕರುಣಿಸಿದ ।೪೯।

* * * *

## ಮೂರನೆಯ ಸಂಧಿ

ರಾಜಿಸುವ ವರ ಭೀಮಪುರದಲಿ
ರಾಜ ನಳನೃಪ ಮದುವೆಯಾಗಿ ಸ
ರಾಜತೇಜದಿ ಬಂದು ಹೊಕ್ಕನು ಪುರವ ಸತಿಸಹಿತ ॥

ಕೇಳು ಧರ್ಮಜ ನಳನ ರೂಪನು
ಕೇಳಲೀ ಹದನಾಯ್ತು ಸತಿಗೆ ನೃ
ಪಾಲನಂಗವು ಗೋಚರಿಸಲೆಂತಹುದೊ ವಿರಹಾಗ್ನಿ
ನಾಲಗೆಗೆ ದ್ರವವಿಲ್ಲ ಮಂಚದ
ಮೇಲೆ ಮಲಗಲು ಬಲಿದವಸ್ಥೆಯ
ಹೇಳಲಿನ್ನೇನರಸ ದಮಯಂತಿಯ ಮನೋವ್ಯಥೆಯ ।೧।

ಲಲನೆ ನಿದ್ರಾಂಗನೆಯನುಳಿದಳು
ಹೊಲಬುದಪ್ಪಿದ ಮನದಿ ಸತಿಯರು
ಸುಳಿಯೆ ನಳನೃಪ ಬಂದನಿದೊ ಎಂದೆನುತ ಕಳವಳಿಸಿ
ನಿಲುಕಿ ನೋಡುವಳೊಮ್ಮೆ ಕಾಣದೆ
ಹಲುಬುವಳು ಮತ್ತೊಮ್ಮೆ ಕಂಡದ
ಕೆಳದಿಯರು ತಮ್ಮೊಳಗೆ ತಾವಾಲೋಚಿಸಿದರಲ್ಲಿ ।೨।

ವಿರಹ ಬಲಿದುದು ಸುತೆಗೆ ನಾವಿದ
ನರಸಗರುಹವೆಂದು ಕೆಳದಿಯ
ರಿರದೆ ಬಂದರು ಭೀಮನೃಪಗಿಂತೆಂದರೀ ಹದನ
ವರ ಕವಿಗಳಂದಿನಲಿ ಧರಣೀ
ಶ್ವರನ ಕೈವಾರಿಸಲು ಕೇಳಿದು
ತರುಣಿ ವಿರಹಕೆ ತನುವ ತೆತ್ತಿಹಳೆಂದರಬಲೆಯರು ।೩।

ಕೇಳಿದನು ನಸುನಗುತ ಭೀಮನೃ
ಪಾಲ ತನ್ನಾತ್ಮಜೆಯ ಯೌವನ
ದೇಳಿಗೆಯನಾಲಿಸುತ ವರನಾರೆಂದು ಚಿಂತೆಯಲಿ
ಓಲಗಕೆ ನಡೆತಂದು ಬರೆಸಿದ
ನೋಲೆಗಳ ಕಳುಹಿದನು ಧರಣೀ
ಪಾಲಕರ ಬರಹೇಳೆನುತ ಹೊಯಿಸಿದನು ಡಂಗುರವ ।೪।

ಹರಿದರರಸಾಳುಗಳು ದಿಕ್ಕುಗ
ಳರಸುಗಳ ನಗರವನು ಇತ್ತಲು
ಪುರವ ಶೃಂಗರಿಸಿದರು ಭೀಮನೃಪಾಲನಾಜ್ಞೆಯಲಿ
ತರಿಸಿದರು ಭಂಡಾರದಲಿ ನವ
ಭರಿತವಾದ ಸುವಸ್ತುಗಳ ವಿ
ಸ್ತರಿಸಿ ಕಟ್ಟಿದರಗಲದಲಿ ವೈವಾಹ ಮಂಟಪವ ।೫।

ಹೊಳೆವ ದಂತದ ಕಂಬಗಳ ಪು
ತ್ಥಳಿಯ ಸಾಲಿನ ಮೇಲುಕಟ್ಟಿನ
ತಳಿರ ತೋರಣದೋರಣದ ಲೋವೆಗಳ ಅರಳೆಲೆಯ
ಬಳಿಯ ಮುತ್ತಿನ ಸರದ ಪವಳದ
ಬಿಳಿಯ ಚೌರಿಯ ಮೇಲುಗಟ್ಟಿನ
ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ ।೬।

ಓರಣದ ಬೀದಿಗಳ ಸಾದಿನ
ಸಾರಣೆಯ ಕತ್ತುರಿಯ ಮಿಗೆ ಪ
ನ್ನೀರ ಚಳೆಯದ ಪರಿಮಳದ ಕುಂಕುಮದ ಕಾರಣೆಯ
ತೋರಣದ ತಳಿಗೆಗಳ ಘನ ಸಿಂ
ಗಾರವೆಸೆಯುವ ಕೇರಿಕೇರಿಯ
ವಾರನಾರಿಯರಿಂದ ಸಂದಣಿಸಿತು ವಿದರ್ಭಪುರ ।೭।

ಮಾಳವಾಂಧ್ರ ಕಳಿಂಗ ಕೋಸಲ
ಚೋಳ ಮತ್ಸ್ಯ ವರಾಳ ಕೊಂಕಣ
ಗೌಳ ಕುಂತಳ ಮಗಧ ಬರ್ಬರ ಪಾಂಡ್ಯ ಕರ್ಣಾಟ
ಲಾಳ ವಂಗ ಸುರಾಷ್ಟ್ರ ಕುರು ನೇ
ಪಾಳ ಘೂರ್ಜರ ಸಿಂಧು ಮರು ಪಾಂ
ಚಾಳ ಮೊದಲಾದಖಿಳ ಧರಣೀಪಾಲರೈದಿದರು ।೮।

ಧರಣಿವಲಯ ದಿಗಂತದವನೀ
ಶ್ವರರು ಭೂಸುರ ಸಿದ್ಧ ವಿದ್ಯಾ
ಧರರು ಸುಜನರು ಮಲ್ಲ ಸಚಿವರು ಮಕುಟವರ್ಧನರು
ಪರಮ ಪುರುಷರು ಪಂಡಿತರು ಕವಿ
ವರರು ನಟ ಗಾಯಕರು ವಿದ್ಯಾ
ಧರರು ದೈವಜ್ಞರುಗಳಗಣಿತರಾಗಿ ನೆರೆದುದು ರಾಯ ಕೇಳೆಂದ ।೯।

ಆ ಸಮಯದಲಿ ನಾರದನು ಹರಿ
ವಾಸುದೇವಾಯೆಂಬ ವೀಣೆಯ
ಭಾಸುರದ ಕರಗಳಲಿ ನುಡಿಸುತ ಮುನಿಗಳೊಗ್ಗಿನಲಿ
ವಾಸವನ ಸಭೆಗೈತರಲು ಸಂ
ತೋಷದಿಂದಿದಿರೆದ್ದು ಘನ ಸಿಂ
ಹಾಸನದಿ ಕುಳ್ಳಿರಿಸಿ ಕೈಮುಗಿದೆಂದನಮರೇಂದ್ರ ।೧೦।

ಎತ್ತಣಿಂದೈತಂದಿರುರ್ವಿಯೊ
ಳುತ್ತಮರು ಧರಣೀಶರಲಿ ನೆರೆ
ಸತ್ಯಧರ್ಮ ಸುಶೀಲರಾರುಂಟಲ್ಲಿ ಗುಣವೇನು
ಚಿತ್ತವಿಸಿ ಮುನಿನಾಥಯೆನಗದ
ಬಿತ್ತರಿಸಿ ಪೇಳೆನಲು ಸುರಮುನಿ
ಚಿತ್ತದಲಿ ನಸುನಗುತ ನುಡಿದನು ಪಾಕಶಾಸನಗೆ ।೧೧।

ಅಮರಪತಿ ಕೇಳವನಿಯಲಿ ಭೂ
ರಮಣರುಂಟು ಅನೇಕರವರೊಳು
ನಿಮಗೆ ಪೇಳ್ವೆ ವಿದರ್ಭಪುರಪತಿ ಭೀಮನೃಪತನುಜೆ
ಕಮಲಮುಖಿ ದಮಯಂತಿಗೆವ್ವನ
ಸಮತಳಿಸೆ ಚಿತ್ತದಿ ಸ್ವಯಂವರ
ಕಮಿತ ಬಲ ನೃಪರ್ಯೆದಿ ಬರುತಿದೆ ಧರಣಿಯಗಲದಲಿ ।೧೨।

ಅಲ್ಲಿ ನೆರೆದ ಸಮಸ್ತ ಧರಣೀ
ವಲ್ಲಭರನೇನೆಂಬೆ ಪಟ್ಟಣ
ವೆಲ್ಲ ನೆರೆದುದು ದೇಶದೇಶಾಂತರದ ಯಾಚಕರು
ನಿಲ್ಲದೈತರುತಿದೆ ವಿವಾಹವ
ನಲ್ಲಿ ನೋಡುವೆವೆನುತ ಮುನಿ ಕರ
ಪಲ್ಲವದ ವೀಣೆಯಲಿ ಹಂಸವನೇರಿ ಹೊರವಂಟ ।೧೩।

ಅರಸ ಕೇಳಮರೇಂದ್ರನಾ ಮುನಿ
ವರನ ವಚನವ ಕೇಳಿ ಹೆಚ್ಚಿದ
ವಿರಹದಲಿ ಕರೆಸಿದನು ಸತಿಯರಿಗೆಂದನೀ ಹದನ
ಪರಮಸತಿ ದಮಯಂತಿಯಳನುಪ
ಚರಿಯದಲಿ ಎನಗೊಲಿಯೆ ಮಾಡೆಂ
ದುರುತರದ ವಸ್ತುಗಳನಿತ್ತಬಲೆಯರ ಬೀಳ್ಕೊಟ್ಟ ।೧೪।

ತರಿಸಿ ಏರಿದ ದಿವ್ಯರಥವನು
ಕರೆಸಿದನು ಯಮ ವರುಣ ವಾಯ
ವ್ಯರು ಸಹಿತ ಹೊರವಂಟನಮರಾವತಿಯನಮರೇಂದ್ರ
ಧರೆಗಿಳಿದು ಬರೆ ಮುಂದೆ ಮಾರ್ಗದಿ
ಸ್ಮರನ ರೂಪಿನ ನೈಷಧನ ಕಂ
ಡರು ಮನೋರಾಗದಲಿ ಕಾಣಿಸಿಕೊಂಡರುಚಿತದಲಿ ।೧೫।

ನಳಿನಮಿತ್ರನ ತೇಜದವೊಲಿಳೆ
ಗಿಳಿವ ಮಹಿಮರ ಕಂಡು ರಥದಿಂ
ದಿಳಿದು ನಳನೃಪ ಭಕ್ತಿಯಲಿ ಕೈಮುಗಿದು ನಿಂದಿರಲು
ತಳಿತ ಹರುಷಾನಂದದಲಿ ಬರ
ಸೆಳೆದು ಬಿಗಿಯಪ್ಪಿದರು ರಾಯನ
ಚೆಲುವನೀಕ್ಷಿಸಿ ನಲಿದು ಕೊಂಡಾಡಿದರು ಮನವೊಲಿದು ।೧೬।

ಕುಶಲವೇ ನಳನೃಪತಿ ಬಾರೈ
ಶಶಿಕುಲೋದ್ಭವ ನಿನ್ನ ಪಿತನೀ
ವಸುಧೆಗಧಿಪತಿ ವೀರಸೇನನು ಪರಮಸಖನೆಮಗೆ
ಒಸೆದು ಬೇಡುವ ಕಾರ್ಯವಿದು ಭರ
ವಸದಿ ಬಂದೆವು ನಮಗೆ ಫಲ ಸಿ
ದ್ಧಿಸಿತು ಉಪಕಾರಾರ್ಥ ನಿನ್ನಿಂದಾಗಬೇಕೆಂದ ।೧೭।

ಕರಿಗಮನ ಚಿತ್ತವಿಸು ನಾವೇ
ನರರು ನಿಮಗಂತರವೆ ಸಾಕಂ
ತಿರಲಿ ನಿಮ್ಮ ಪದಾಬ್ಜ ದರುಶನವಾದುದಿಂದಿನಲಿ
ಹರುಷ ಮಿಗೆ ನಮಗೇನು ಬುದ್ಧಿಯ
ಕರುಣಿಸುವಿರದ ಮಾಳ್ಪೆನೆನೆ ಶಚಿ
ಯರಸನಾ ನುಡಿಗೇಳಿ ನಗುತಿಂತೆಂದನಾ ನೃಪಗೆ ।೧೮।

ಭೂತಳದೊಳಿಹ ಸತಿಯರಲಿ ರೂ
ಪಾತಿಶಯೆ ದಮಯಂತಿಯೆನಲಾ
ಮಾತಿನಲಿ ಮನವೊಲಿದುದೆನಗವಳಲ್ಲಿ ನೀ ಪೋಗಿ
ಆ ತಳೋದರಿಗುಚಿತ ವಚನ
ಪ್ರೀತಿಪೂರ್ವಕದಿಂದ ಸತಿಯಳ
ನೀ ತಿಳುಹಿಯನುಕೂಲೆಯನು ಮಾಡೆಂದನಮರೇಂದ್ರ ।೧೯।

ಈತ ಪಿತೃಪತಿಯಮರಪತಿ ತಾ
ನೀತ ವರುಣನು ವಾಯುವೀತನು
ಮಾತ ಮನ್ನಿಸು ಮಾಡು ನಮಗುಪಕಾರವನು ನೀನು
ಈ ತತುಕ್ಷಣದೃಶ್ಯ ವರವನು
ಪ್ರೀತಿಯಿಂದೊಲಿದಿತ್ತೆವಿಂದಿನೊ
ಳಾ ತಳೋದರಿಯೊಲಿವ ಹದನನು ಮಾಡು ಹೋಗೆಂದ ।೨೦।

ಕೇಳಿದಾ ಮಾತಿನಲಿ ಚಿಂತೆಯ
ತಾಳಿದನು ಚಿತ್ತದಲಿ ನಳನೃಪ
ಲೋಲಲೋಚನೆ ತನ್ನನೇ ಪತಿಯೆಂದು ಭಜಿಸಿಹಳು
ಆ ಲತಾಂಗಿಯ ಮೇಲೆ ಪರಮ ವಿ
ಶಾಲ ಮನವಿಹುದಿನ್ನು ಶಿವಶಿವ
ಬಾಲಕಿಯ ಬೆಸಗೊಳಲು ನಾಲಗೆಯೆಂತು ತನಗೆಂದ ।೨೧।

ಎಂದು ಮನದಲಿ ಮರುಗಿ ವಿನಯದೊ
ಳೆಂದನೆಲೆಯಮರೇಂದ್ರ ನಿಮಗಾ
ಮಂದಗಮನೆಯನೊಳಗು ಮಾಡೆಂದೆನಗೆ ಪೇಳ್ವಿರಲ
ಹಿಂದುಗಳೆದರೆ ಮನಕೆ ಖತಿ ನಿಮ
ಗಿಂದು ಬಾರದೆ ಬಿಡದು ಲೋಕದಿ
ಇಂದುಮುಖಿಯರ ಗುಣವ ತಿಳಿಯಲಸಾಧ್ಯ ಕೇಳೆಂದ ।೨೨।

ಆ ಯುವತಿಯರು ಕಾರ್ಯಗಳ ನೆರೆ
ಬೀಯ ಮಾಳ್ಪರು ಕುಟಿಲ ವಿದ್ಯದಿ
ಮಾಯೆಗಳ ಹಣ್ಣುವರು ನಿತ್ಯದಿ ಹುಸಿಯನಾಡುವರು
ಕಾಯವಳಿದರು ಅಂತರಂಗವ
ಬಾಯಬಿಡರನ್ಯಾವಾಡುವ
ರಾಯತಾಕ್ಷಿಯರಂದವಿದು ಸುರರಾಜ ಕೇಳೆಂದ ।೨೩।

ಕಪಟವನು ಬಿಡರಾತ್ಮಬುದ್ಧಿಯೊ
ಳುಪಮೆಗಾಣದೆ ನುಡಿದು ಹೊಳೆವರು
ಚಪಲ ಚಿತ್ತದಿ ಮನವ ವಂಚಿಸಿ ಮಾತನಾಡುವರು
ಗುಪಿತವಳವಡದಾಪ್ತರೊಡವೆಯ
ನಪಹರಿಸಿ ಸಾಹಸವ ಮೆರೆವರು
ನಿಪುಣೆಯರಿಗಿದು ಸಹಜಗುಣವಮರೇಂದ್ರ ಕೇಳೆಂದ ।೨೪।

ಸಾವಿಗೆಣಿಸರು ಮನದಿ ಸತ್ಯವ
ಭಾವಿಸರು ಹುಸಿಯೊಲುಮೆದೋರುವ
ರಾವ ಪರಿಯಲಿ ಹೃದಯಗೊಡದನೃತಗಳನಾಡುವರು
ವಾವೆವರ್ತನವಿಲ್ಲ ಸತ್ಯಕೆ
ಪಾವಕನ ಮುಟ್ಟುವರು ಸತಿಯರ
ನಾವ ಪರಿಯಲಿ ನಂಬಬಹುದೈ ಎನುತ ಹೊರವಂಟ ।೨೫।

ನಲವು ಹಿಂಗಿದ ಮನದಿ ನೃಪ ಮಾ
ರ್ಬಲವನಲ್ಲಿಯೆ ನಿಲಿಸಿ ಬರುತಿರೆ
ತಳಿತ ರತ್ನಪ್ರಭೆಯ ಸಾಲಿನ ಸೌಧ ಪಂಕ್ತಿಗಳ
ಹೊಳೆವ ಕಲಶದ ಗೋಪುರದ ಕೊ
ತ್ತಳದ ಸಾಲಿನ ಕೋಂಟೆಯನು ಕಂ
ಡಲಘುಭುಜಬಲ ನೃಪತಿ ಹೊಕ್ಕ ವಿದರ್ಭಪಟ್ಟಣವ ।೨೬।

ಅರಮನೆಯ ಬಾಗಿಲಿಗೆ ಬರಲಿ
ತ್ತೆರದ ವೇದಿಕೆಗಳಲಿ ಪಟುಬ್ಬಟ
ರುರುತರದ ಕೈದುಗಳ ಕಾಹಿನ ದಾರವಟ್ಟದಲಿ
ಇರಲು ಕಂಡಾ ತರುಣಿಯರು ಸಂ
ಚರಿಸುತಿಹ ಸಡಗರವ ನಳಭೂ
ವರನದೃಶ್ಯದ ರೂಪಿನಲಿ ಒಳಹೊಕ್ಕನರಮನೆಯ ।೨೭

ಆಗಲಾ ದಮಯಂತಿ ಚಿತ್ರದ
ಬಾಗಿಲುಪ್ಪರಿಗೆಯಲಿ ರತ್ನದ
ತೂಗು ಮಂಚದ ಹಾಸಿನಲಿ ಕುಳ್ಳಿರಲು ಕೆಳದಿಯರು
ಆ ಗರುವೆಯೋಲಗದೊಳಿರುತಿರೆ
ಪೂಗಣೆಯನೆಸುಗೆಯಲಿ ನಳಚರಿ
ತಾಗಮದ ಕಥನಗಳ ತಾನಾಲಿಸುತ ಚಿತ್ತದಲಿ ।೨೮।

ಬಂದರಲ್ಲಿಗೆ ಸುರಪ ಕಳುಹಿದ
ಮದಗಮನೆಯರಖಿಳ ವಸ್ತುವ
ತಂದು ಕಾಣಿಕೆಗೊಟ್ಟು ಕೈಮುಗಿದೆರಗಿ ನಿಂದಿರಲು
ಬಂದ ಸತಿಯರ ನೋಡಿ ನೀವೆ
ಲ್ಲಿಂದ ಬಂದಿರಿ ನಿಮ್ಮ ಹದನೇ
ನೆಂದು ಬೆಸಗೊಳೆ ವಿನಯದಿಂದರುಹಿದರು ಮಾನಿನಿಗೆ ।೨೯।

ತಾಯೆ ಕೇಳಮರೇಂದ್ರ ನಿಮ್ಮ ನಿ
ಜಾಯತದ ಚೆಲುವಿಕೆಯ ಕೇಳಿದು
ಕಾಯಜನ ಶರಹತಿಗೆ ನೊಂದುರೆ ಕಳುಹಿದನು ನಮಗೆ
ಆಯತದ ಭೂಷಣವ ತೊಡು
ಸುರರಾಯನಿಗೆ ಸತಿಯಾಗು ಮರ್ತ್ಯದ
ರಾಯರಸ್ಥಿರರವರ ನೆಚ್ಚದಿರೆಂದರಾ ಸತಿಗೆ ।೩೦।

ಪದವಿ ಯಾವುದು ಲೋಕದಲಿ ಸುರ
ಪದವಿಯಲ್ಲದೆ ಬೇರೆ ಮಿಕ್ಕಿನ
ಪದವಿಯುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ
ಸದರವೇ ನರಜನ್ಮದವರಿಗೆ
ಒದಗಲರಿಯದು ಪುಣ್ಯ ನಿನಗಿದು
ಸುದತಿ ಕರುಣಿಸು ಮಾತನೆಂದರು ನಗುತ ರಂಭೆಯರು ।೩೧।

ಅಲರ ಪರಿಮಳದೆಡೆಗೆ ತುಂಬಿಗ
ಳೊಲಿದು ಪೋಪಂದದಲಿ ಲೋಕದೊ
ಳಲರು ವಿಕಸಿತವಾಗಿ ಹೋಹುದೆ ತುಂಬಿಯಿದ್ದೆಡೆಗೆ
ಸಲೆ ತವಕದಿಂದಮರಪತಿಯೆಡೆ
ಗೊಲಿದು ನೀ ಪೋಪಂತೆ ಸುರಪತಿ
ನಲುವಿನಿಂದಲಿ ನಿನ್ನ ಬಳಿಗೈದುವನು ಪುಣ್ಯವಲಾ ।೩೨।

ಎನಲು ಕೇಳಿದಳಾ ನುಡಿಯ ಸುರ
ವನಿತೆಗೆಂದಳು ಚಿತ್ತವೆನಗೊ
ಬ್ಬನಲಿ ಸಿಲುಕಿತು ಮರಳಿಪೊಡೆ ಕಮಲಾಕ್ಷಗಳವಲ್ಲ
ಅನಿಮಿಷಾಧಿಪ ತನಗೆ ದೇವಾಂ
ಗನೆಯರಿರುತಿರೆ ಮನುಜಸತಿ ಪಾ
ವನವೆ ಬರಿದೆ ದುರಾಸೆ ತನಗೇಕೆಂದಳಿಂದುಮುಖಿ ।೩೩।

ಮರಳಿದರು ಸುರಸತಿಯರಿತ್ತಲು
ಬರುತೆ ನಳನೃಪತಿಲಕ ತಾ ಮನ
ಹರುಷದಲಿ ನಿಜರೂಪ ತಾಳ್ದನು ರಾಜತೇಜದಲಿ
ಅರಸನಿರೆ ದಮಯಂತಿ ಕಂಡ
ಚ್ಚರಿಯ ಮದನನೊ ನಳನೊ ನಳಕೂ
ಬರನೊ ಜಯಂತನೊ ಎನೆ ವಿಸ್ಮಯಗೊಂಡಳಾ ತರುಣಿ ।೩೪।

ಎಂದು ಪರಿತೋಷದಲಿ ನಾರೀ
ವೃಂದ ಸಹಿತಿದಿರೆದ್ದು ವಿನಯದಿ
ನಿಂದು ಕರಗಳ ಮುಗಿದು ಸಿಂಹಾಸನದಿ ಕುಳ್ಳಿರಿಸಿ
ತಂದು ಮುಕ್ತಾಫಲಗಳನು ಮುದ
ದಿಂದ ಕಾಣಿಕೆಯಿತ್ತು ಸತಿಯರ
ಸಂದಣಿಯ ಕೆಲಕೊತ್ತಿ ನುಡಿದಳು ಮಧುರವಚನದಲಿ ।೩೫।

ಆರು ನೀವೆಲ್ಲಿಂದ ಬಂದಿರಿ
ಕಾರಣವಿದೇನಮ್ಮ ರಾಜ
ದ್ವಾರದಲಿ ನೀವ್ ಹೊಕ್ಕ ಹದನೇನಿಲ್ಲಿ ಗಂಡುನೊಣ
ಸೇರಲಮ್ಮದು ನೀವಘಾಡದ
ವೀರರತಿ ಸೌಂದರ್ಯರೆನೆ ನಳ
ಭೂರಮಣ ನಸುನಗುತ ನುಡಿದನು ಸತಿಗೆ ವಿನಯದಲಿ ।೩೬।

ತರುಣಿ ಕೇಲಮರೇಂದ್ರನಟ್ಟಿದ
ಚರನು ತಾ ಮಿಗೆ ನಿನ್ನ ರೂಪನು
ಸುರಮುನಿಪನರುಹಿದರೆ ಕೇಳಿದನಿಂದ್ರ ವಿರಹದಲಿ
ಕರಗಿ ಮದನನ ಶರಹತಿಗೆ ಮನ
ಮರುಗಿ ಬಂದಿಹನಿಲ್ಲಿಗಾತಂ
ಗರಸಿಯಾಗೆನೆ ಕೇಳಿ ಮುಖದಿರುಹಿದಳು ದಮಯಂತಿ ।೩೭।

ಬಲ್ಲವರು ನೀವಧಿಕರೆಮ್ಮೊಳು
ಸಲ್ಲದೀ ನುಡಿಯೇತಕಿದು ಶಚಿ
ವಲ್ಲಭನ ಮಾತೇನು ಸಾಕಂತಿರಲಿ ಎನಗಿನ್ನು
ವಲ್ಲಭನು ನಳನೃಪತಿಯಲ್ಲದೆ
ನಲ್ಲರುಂಟೇ ಜಗದಿ ನೀವ್ ಸುರ
ರಲ್ಲ ನಿಮ್ಮಭಿಧಾನವೇನೆಂದಳು ಸರೋಜಮುಖಿ ।೩೮।

ದೂತರಲಿ ಕುಲಗೋತ್ರಗಳ ನೀ
ನೇತಕರಸುವೆ ತರುಣಿ ಇಂದ್ರನು
ಖ್ಯಾತ ಪುರುಷನು ಬಯಸುವುದು ಕೃತಪುಣ್ಯ ನಿನಗಿನ್ನು
ಭೂತಳದ ನರರಧಿಕರೇ ಸಂ
ಪ್ರೀತಿಯೇಕವರಲ್ಲಿ ಬಿಡು ಪುರು
ಹೂತನನು ಕೈವಿಡಿದು ನೀ ಸುಖಿಯಾಗು ನಡೆಯೆಂದ ।೩೯।

ಇಳೆಯ ಮರ್ತ್ಯರು ನಾಕನಿಳಯರಿ
ಗಳವೆಯಂತವರೆಲ್ಲ ನುಡಿಯಲು
ಕುಲಗಿರಿಗೆ ನೊರಜಂತರವೆ ನೀ ನೋಡು ಚಿತ್ತದಲಿ
ನಳನೃಪನ ಬಯಸುವಡೆ ನಿನಗವ
ನೊಲಿವನೇ ಧಾತ್ರೀಶರೊಳಗ
ಗ್ಗಳನೆ ಸಾಕೆಂದೆನಲು ಕನಲಿದು ನುಡಿದಳಾ ತರುಣಿ ।೪೦।

ಮಾನವಾಧೀಶ್ವರರೊಳಗೆ ಸನು
ಮಾನವುಳ್ಳವ ಸತ್ಯಸಂಧ ನಿ
ಧಾನಿ ಹಿಮಕರವಂಶಪಾವನ ಸಾರ್ವಭೌಮನಲೆ
ಆ ನರೇಂದ್ರಗೆ ಸರಿಯೆ ಮನುಮುನಿ
ದಾನವಾಮರರಿನ್ನು ನಿಮಗೀ
ಹೀನವೃತ್ತಿಯ ಮಾತದೇಕೆಂದಳು ಸರೋಜಮುಖಿ ।೪೧।

ನಿಷಧಪತಿಯೇ ಪತಿಯೆನುತ ಭಾ
ವಿಸಿದೆನಾತನ ಕರುಣವೆನ್ನಲಿ
ಪಸರಿಸಿದಡದು ಲೇಸು ಲೇಸಲ್ಲದೊಡೆ ನಳನೃಪಗೆ
ಅಸುವ ತೆರುವೆನು ಎನಗೆ ಫಲ ಸಿ
ದ್ಧಿಸಲಿದೇ ಸಂಕಲ್ಪವೆಂದಾ
ಶಶಿವದನೆ ಕಂಬನಿಯ ಮಿಡಿದಳು ನಖದ ಕೊನೆಯಲ್ಲಿ ।೪೨।

ಕರಗಿತಂತಃಕರಣ ನೃಪತಿಗೆ
ಸರಸಿಜಾಕ್ಷಿಯ ದೃಢವ ಕಂಡನು
ಕರುಣಲತೆ ಕುಡಿದೋರಿತಾಕ್ಷಣ ನುಡಿದನಾ ಸತಿಗೆ
ಸರಸಿಜಾನನೆ ಕೇಳು ತಾನೇ
ಧರಣಿಪತಿ ನಳನೆನಲು ಲಜ್ಜಿಸಿ
ಶಿರವ ನಸುಬಾಗಿದಳು ಮತ್ತಿಂತೆದಳಾ ನೃಪಗೆ ।೪೩।

ನಾಕನಿಳಯರು ಕುಟಿಲವಿದ್ಯರ
ನೇಕ ಮಾಯಾವಿದರು ಧರೆಯೊಳು
ಪ್ರಾಕೃತರು ನಾವ್ ನಿಮ್ಮ ನಂಬುವ ಪರಿಯದೆಂತೆನಗೆ
ಸಾಕು ಮನ ನಂಬುವರೆ ಹೃದಯದ
ಜೋಕೆಯಲಿ ಕುರುಹೆನಗೆ ತೋರೆನ
ಲಾ ಕಮಲಲೋಚನೆಗೆ ನುಡಿದನು ನೃಪ ನಿದರ್ಶನವ ।೪೪।

ವನಜ ಮುಖಿ ನಿನ್ನಂತರಂಗದ
ಮನವ ಕಾಣುವ ಬಗೆಯೊಳಾನಿಂ
ದಿನಲಿಯನಿಮಿಷನೆಂದು ಪೇಳಿದೆನಿದರ ತಪ್ಪೇನು
ಮನದ ಸಂಶಯವೇನು ಹಂಸೆಯ
ನಿನಗೆ ಕಳುಹಿದೆ ರಾಯಭಾರದಿ
ವನಿತೆ ನೀನಿದ ತಿಳಿದು ನಂಬುವುದೆನ್ನ ನೀನೆಂದ ।೪೫।

ನಳನೆನಲು ತನು ಪುಳಕಜಲದಲಿ
ಮುಳುಗಿ ಹೊಂಪುಳಿವೋ ಗಿ ತನ್ನಯ
ಕೆಳದಿಯರ ಮರೆಗೊಂಡು ಹರುಷದ ಹೃದಯಭೀತಿಯಲಿ
ತೊಲಗಿದಳು ನೃಪನಿತ್ತ ಪುರವನು
ಕಳೆದು ಬಂದನು ಮನದ ವಿರಹದಿ
ಬಳಲುತಿಹ ದೇವೇಂದ್ರನಿದ್ದೆಡೆಗಾಗಿ ವಹಿಲದಲಿ ।೪೬।

ಬಂದು ಭಯಭೀತಿಯಲಿ ನಳನೃಪ
ನಿಂದ್ರ ಮಾರುತ ಯಮ ವರುಣರಿಗೆ
ವಂದಿಸುತ ದಮಯಂತಿ ಪೇಳಿದ ಮಾತ ವಿವರಿಸಲು
ಒಂದು ನಿನ್ನಲಿ ಕುಟಿಲವಿಲ್ಲರ
ವಿಂದ ವದನೆಯರಿಂದ ಕೇಳಿದೆ
ವೆಂದು ಸಂತೈಸಿದರು ಭಯಗೊಂಡಿಹ ನೃಪಾಲಕನ ।೪೭।

ನಳಿನಮುಖಿಯರ ಕಪಟಚಿತ್ತವ
ತಿಳಿಯಲಾರಿಗೆ ಸಾಧ್ಯ ಕೇಳೈ
ನಳನೃಪತಿ ನಮಗಾಗಿ ಬಳಲಿದೆಯೆನುತಲುಪಚರಿಸಿ
ಒಲಿದು ಭೂಷಣವಿತ್ತು ಕಳುಹಿದ
ರಿಳೆಯ ವಲ್ಲಭನಲ್ಲಿ ತಾವ್ ತ
ಮ್ಮೊಳಗೆಯಾಲೋಚಿಸಿದರಾ ಇಂದ್ರ ಯಮ ಮಾರುತರು ।೪೮।

ಲಲನೆಯೊಲಿವುದಕಿನ್ನು ಹದನಿದು
ಹಲವು ಮಾತೇನೆಂದು ನಾಲ್ವರು
ನಳನ ರೂಪನು ತಾಳ್ದರಿತ್ತಲು ಧರಣಿವಲ್ಲಭರು
ನಲಿದು ಬರುತಿರೆ ಸ್ವರ್ಗ ಮರ್ತ್ಯ
ವಳಿಯ ಜನ ಸುರ ಸಿದ್ಧ ಕಿನ್ನರ
ರೊಲಿದು ಗುಹ್ಯಕ ಗರುಡ ಗಂಧರ್ವಾದಿ ಸುರರಲ್ಲಿ ।೪೯।

ನೆರೆದುದಗಣಿತದರಸುಗಳು ಕರಿ
ತುರಗ ರಥ ಪಾಯ್ದಳದ ಸಂದಣಿ
ಮೆರೆವ ಶಂಖ ಮೃದಂಗ ತಂಬಟ ಭೇರಿ ನಿಸ್ಸಾಳ
ಅರುಬಿತಲ್ಲಿ ವಿದರ್ಭಪುರಪತಿ
ಧರಿಸಲಾಪನೆ ಹರ ಮಹಾದೇ
ವರಸ ಬಣ್ಣಿಸಲರಿಯೆ ನೆರೆದ ಮಹಾಮಹೀಸುರರ ।೫೦।

ಅವರ ಪರಿಯಲಿ ಕರೆದು ವಿನಯದೊ
ಳವರವರ ಮರಿಯಾದೆ ಮೇರೆಯೊ
ಳವರವರ ಸತ್ಕರಿಸಿ ಕುಳ್ಳಿರಿಸಿದನು ಭೀಮನೃಪ
ಅವರವರಿಗುಚಿತೋಪಚಾರದೊ
ಳವರವರ ಮನ್ನಿಸುತಲಿರ್ದನು
ಭುವನಪತಿಗಳನೇಕರನು ಸಭೆಯೊಳಗೆ ಕೇಳೆಂದ ।೫೧।

ಒಂದು ಕಡೆಯಲಿ ತಾಳ ಮದ್ದಳೆ
ಯೊಂದು ಕಡೆಯಲಿ ಸರಸ ನೃತ್ಯಗ
ಳೊಂದು ಕಡೆಯಲಿ ಸಾರತರ ಸಂಗೀತ ಸಾಹಿತ್ಯ
ಒಂದು ಕಡೆಯಲಿ ಗದ್ಯಪದ್ಯಗ
ಳೊಂದು ಕಡೆಯಲಿ ತರ್ಕಶಾಸ್ತ್ರಗ
ಳೊಂದು ಕಡೆಯಲಿ ಹಾಸ್ಯದಿಂದಿರುತಿರ್ದುದಾಸ್ಥಾನ ।೫೨।

ಇತ್ತಲಾ ದಮಯಂತಿಗೆಣ್ಣೆಯ
ನೊತ್ತಿದರು ಶೋಭಾನಗಳ ಪಾ
ಡುತ್ತ ಗೆಲಿದರು ತಿಗುರ ಮಿಗೆ ವಿವಿಧೋಪಚಾರದಲಿ
ಉತ್ತಮಾಂಗನೆಗಳವಡಿಸೆ ನಲಿ
ಯುತ್ತ ಸತಿಯರು ಮಜ್ಜನದ ಮನೆ
ಗತ್ಯಧಿಕ ಹರುಷದಲಿ ದಮಯಂತಿಯನು ಕರೆದೊಯ್ದು ।೫೩।

ಬೆರಸಿದರು ಪನ್ನೀರ ಹೊಂಗೊ
ಪ್ಪರಿಗೆಯಲಿ ಮೊಗೆಮೊಗೆದು ನಾರಿಯ
ರೆರೆದರಂಗನೆಗಮಳ ಚಂದನ ಗಂಧಪರಿಮಳದಿ
ತರುಣಿಯರು ಲೇಪಿಸಿದರರಸಿಗೆ
ವರದುಕೂಲಾಭರಣಗಳ ಶೃಂ
ಗರಿಸಿದರು ದಮಯಂತಿಯೊಪ್ಪಿದಳಧಿಕ ತೇಜದಲಿ ।೫೪।

ಮಡದಿಯರು ಬಳಸಿದರು ಸುತ್ತಲು
ಹಡಪ ಚಾಮರ ಗಿಂಡಿಯೂಳಿಗ
ದೊಡನಿರಲು ಬಂದಳು ಸಿತಾಬ್ಜಕೆ ಲಕ್ಷ್ಮಿಯಂದದಲಿ
ಎಡಬಲದೊಳಿಹ ಕಂಚುಕಿಗಳು
ಗ್ಗಡಿಸೆ ಪಾಯವಧಾರಿನಲಿ ಮುಂ
ಗುಡಿಯ ಸತಿಯರ ಗಡಣದಲಿ ನಡೆತಂದಳಿಂದುಮುಖಿ ।೫೫।

ಕುಡಿತೆಗಂಗಳ ಸಿರಿಮುಡಿಯ ಬಡ
ನಡುವ ಸೆಳೆವತಿ ಬೆಡಗಿನಲಿ ಹೊಂ
ಗೊಡದ ಮೊಲೆ ವೈಯಾರದುಡುಗೆಯ ಸಿರಿಯ ಸಡಗರದ
ತೊಡರ ಝುಣಝುಣ ರವದ ಮೆಲ್ಲಡಿ
ಯಿಡುವ ಗಮನದ ಭರದಿ ಕಿರು ಬೆಮ
ರಿಡುತ ಬಂದಳು ಸಖಿಯರೊಡನೆ ವಿವಾಹಮಂಟಪಕೆ ।೫೬।

ಅವನಿಪತಿ ನಿಜಕುವರಿಗೆಂದನು
ವಿವಿಧರತುನದ ಮಕುಟವರ್ಧನ
ಭುವನಪತಿಗಳನೇಕವಿದೆಲಾ ಸಿಂಹಪೀಠದಲಿ
ಯುವತಿ ನೋಡಿತ್ತೆರದೊಳಿಹ ನೃಪ
ನಿವಹದಲಿ ನೀ ಹಾಯ್ಕು ಮನವಿ
ದ್ದವನ ಕೊರಳಿಗೆನುತ್ತ ಕೊಟ್ಟನು ಪುಷ್ಪಮಾಲಿಕೆಯ ।೫೭।

ಬಂದಳಾ ದಮಯಂತಿ ನೃಪಸಭೆ
ಗಂದು ಹೊಕ್ಕಳು ಕೆಳದಿಯರು ಮುದ
ದಿಂದ ತೋರಿದರಲ್ಲಿ ಇವರಿವರೆಂದು ವಿವರಿಸುತ
ಮುಂದೆ ಬರೆ ಕೈಕಂಬಿಯರ ಬಲು
ಸಂದಣಿಯ ಕೆಲಕೊತ್ತಿಸುತಲಿರ
ಲಿಂದುಮುಖಿ ನೋಡಿದಳು ಲಜ್ಜಾಭರದೊಳವನಿಪರ ।೫೮।

ಮಾಳವಾಧಿಪನೀತ ಮಗಧನೃ
ಪಾಲನೀತನು ಮತ್ಸ್ಯ ಕುರು ನೇ
ಪಾಲನೀತನು ಕೋಸಲಾನ್ವಯನೀತ ಬರ್ಬರನು
ಚೋಳನೀತನು ಸಿಂಧುರಾಜನು
ನೀಲನೀತ ಕಳಿಂಗ ಕುಂತಳ
ಪಾಲಕನ ನೋಡಿತ್ತಲಮರೇಶ್ವರನ ಓಲಗವ ।೫೯।

ಎನ್ನನೊಲಿದಿಹಳೆಂದು ಕೆಲಬರು
ಸನ್ನೆಮಾಡಿದಳೆಂದು ಕೆಲಬರು
ಗನ್ನದಿಂದೀಕ್ಷಿಸುತಲಿದ್ದರು ಕೆಲರು ಹುಬ್ಬಿನಲಿ
ಸನ್ನೆದೋರಿದಳೆಂದು ಕೆಲಬರು
ಬಿನ್ನಣದಿ ಮಿಗೆ ಓರೆ ನೋಟದ
ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು ।೬೦।

ಬಾಯ ಬಿಂಕದ ಸವಿನುಡಿಯನಾ
ರಾಯರಾಡಿದರಲ್ಲಿ ಕಮಲದ
ಳಾಯತಾಂಬಕಿ ನಳನ ರೂಪಿನ ನಾಲ್ವರಿಗೆ ಕಂಡು
ಮಾಯವಿದು ತಾನರಿಯೆನಿವರ ನಿ
ಜಾಯತವನೆಂದೆನುತ ಮುರಿದಾ
ವಾಯುಗತಿಯಲಿ ಬಂದು ಹೊಕ್ಕಳು ತನ್ನ ಮಂದಿರವ ।೬೧।

ಕಂಡುಪೇಕ್ಷಿಸಿ ಬಂದಳಂಗನೆ
ಮಂಡಲಾಧಿಪರೆಲ್ಲರನು ಅದ
ಕಂಡು ಭೀಮನೃಪಾಲ ತನುಜೆಯ ಬಳಿಗೆ ನಡೆತಂದು
ಅಂಡಲೆದು ಬೆಸಗೊಂಡೊಡಂದಾ
ಖಂಡಲನ ಮಾಯೆಗಳ ವಿವರಿಸೆ
ಚಂಡಬುದ್ಧಿಯನುಳ್ಳ ನೃಪ ಚಿಂತಿಸಿದ ಭಾರತಿಯ ।೬೨।

ವಾಣಿ ನೀರಜಪಾಣಿ ಬ್ರಹ್ಮನ
ರಾಣಿ ಪನ್ನಗವೇಣಿ ಸುಕೃತ
ಶ್ರೋಣಿ ಸುರನಿಕುರಂಬವಂದಿತೆ ಸತ್ಯಸಂಚಾರಿ
ವಾಣಿ ಸ್ತ್ರೀಕುಲರನ್ನೆ ವರಗೀ
ರ್ವಾಣಿ ರಕ್ಷಿಸು ರಕ್ಷಿಸೆಂದಾ
ಕ್ಷೋಣಿಪತಿ ಕೈಮುಗಿದು ಬೇಡಿದನಾ ಸರಸ್ವತಿಯ ।೬೩।

ನೆನೆಯಲಾಕ್ಷಣ ಬಂದಳಲ್ಲಿಗೆ
ವನಜನಾಭನ ಸೊಸೆ ಜಗತ್ಪಾ
ವನೆ ಸುರಾರ್ಚಿತೆ ದೇವಿ ಭಕ್ತಾಶ್ರಿತಜನಾಧಾರೆ
ಜನಪ ನೀನಿಂದಿನಲಿ ಎನ್ನನು
ನೆನೆದ ಹದನೇನೆನಲು ಪದಯುಗ
ವನಜಕಾನತನಾಗಿ ಬಿನ್ನೈಸಿದನು ಭಾರತಿಗೆ ।೬೪।

ನಿಗಮನುತೆ ಗೀರ್ವಾಣಿ ರಕ್ಷಿಸು
ಮುಗುದರನು ಕರುಣದಲಿ ನೋಡುತ
ಲಗಣಿತದಿ ಅರಸುಗಳು ನೆರೆದಿರೆ ತಿಳಿಯಲರಿದೆಮಗೆ
ಮಗಳ ಮನ ವಿಗಡಿಸಿತು ನಾಲ್ವರು
ಬೆಗಡುಗೊಲಿಸಿದರೆನಲು ಭಾರತಿ
ನಗುತ ನುಡಿದಳು ಕರೆದು ದಮಯಂತಿಯಳನುಪಚರಿಸಿ ।೬೫।

ದೇವ ಮಾಯವಿದೀಗ ಕೇಳೆಲೆ
ದೇವಿ ಇಂದ್ರನ ಭಜಿಸೆನಲು ಸಂ
ಭಾವನೀಯರ ಸಭೆಗೆ ಬಂದೆರಗಿದಳು ಭಕ್ತಿಯಲಿ
ದೇವಕುಲಸಂಭವರು ರಕ್ಷಿಸಿ
ನೀವು ಮಗಳೆಂದೆನ್ನ ಭಾವಿಸಿ
ಪಾವನರು ತರಳೆಯನು ಪತಿಕರಿಸೆಂದಳಿಂದುಮುಖಿ ।೬೬।

ಘಳಿಲನೇ ಪ್ರಚ್ಛನ್ನವೇಷವ
ಕಳೆದು ಯಮ ಪವಮಾನ ವರುಣರು
ಬಳಿಕ ಸುರಪತಿ ಮೆಚ್ಚಿ ದಮಯಂತಿಯನು ಕೊಂಡಾಡಿ
ನಳನೃಪನ ಕರೆಸಿದರು ಹೂವಿನ
ಮಳೆಯ ಕರೆದರು ದೇವದುಂದುಭಿ
ಮೊಳಗಲರಸನ ಕೊರಳಿಗಿಟ್ಟಳು ಪುಷ್ಪಮಾಲಿಕೆಯ ।೬೭।

ಆ ಸಮಯದಲಿ ಭೀಮನೃಪ ಸಂ
ತೋಷದಲಿ ಕರೆಸಿದನು ಮುನಿಗಳ
ಸೇಸೆದಳಿದರು ಸತಿಪತಿಯರಿಗೆ ಹರಸಿ ಅಕ್ಷತೆಯ
ಭೂಸುರರ ಮತದಿಂದಲಾ ಧರ
ಣೀಶ ಧಾರೆಯನೆರೆದನಲ್ಲಿ ವಿ
ಲಾಸದಿಂದ ಪಾಡಿದರು ಮುತ್ತೈದೆಯರು ಶೋಭನವ ।೬೮।

ಮಂಗಳಾರತಿಯೆತ್ತಿದರು ದೇ
ವಾಂಗನೆಯರವನಿಪಗೆ ಧರೆಯೊಳು
ತುಂಗವಿಕ್ರಮನಾಗೆನುತ ಹರಿಸಿದರು ಮುನಿವರರು
ಹಿಂಗದಮರೇಂದ್ರನು ಮನೋಹರ
ದಂಗವಸ್ತ್ರಾಭರಣವಿತ್ತು ಸು
ರಾಂಗನೆಯರೊಡಗೂಡಿ ಕಳುಹಿಸಿಕೊಂಡನುಚಿತದಲಿ ।೬೯।

ಅರಸ ಕೇಳು ವಿವಾಹಸಮನಂ
ತರದೊಳೈದನೆಯ ದಿನದಲಿ ಕೊ
ಪ್ಪರಿಗೆಯಲಿ ತುಂಬಿದ್ದ ಪನ್ನೀರಿನಲಿ ಕುಂಕುಮವ
ಬೆರಸಿ ಹೊಯ್ದಾಡಿದರು ಉಭಯದ
ತರುಣಿಯರು ಓಕುಳಿಯ ಪರಿಮಳ
ಹೊರೆದುದವನೀತಳವ ಸುರನಿಕುರುಂಬ ನಲಿದಾಡೆ ।೭೦।

ಅರಸ ಕೇಳೈ ತನ್ನ ಬಾಂಧವ
ಧರಣಿಪರ ಮಂತ್ರಿಗಳ ಮುನಿಮು
ಖ್ಯರ ಸುಗಾಯಕ ಪಂಡಿತರ ಭೂಸುರರ ಯಾಚಕರ
ಹರುಷ ಮಿಗಲಾದರಿಸಿದನು ಕರಿ
ತುರಗ ವಸ್ತ್ರಾಭರಣದಿಂದುಪ
ಚರಿಸಿ ಭೀಮನೃಪಾಲನವರವರುಗಳ ಬೀಳ್ಕೊಟ್ಟ ।೭೧।
ಅಳಿಯನನು ಮನ್ನಿಸುತ ಮಗಳಿಗೆ

ಹೊಳೆವ ಮಣಿಭೂಷಣದ ಪೆಟ್ಟಿಗೆ
ಗಳನು ಗಜ ರಥ ತುರಗ ಪಾದಾತಿಗಳ ಲಲನೆಯರ
ಬಳುವಳಿಯನಿತ್ತವನಿಪತಿ ನಿಜ
ಬಲಸಹಿತ ಮಾಡಿದನು ಪಯಣವ
ನುಲಿವ ಮಂಗಳ ಪಾಠಕರ ಸಂದಣಿಯ ರಭಸದಲಿ ।೭೨।

ವರ ಮುಹೂರ್ತದೊಳೇರಿದನು ಮಣಿ
ಕಿರಣದುನ್ನತ ರಥವ ನಳಭೂ
ವರನು ನಿಜಸತಿ ಸಹಿತ ಹೊಕ್ಕನು ನಿಷಧ ಪಟ್ಟಣವ
ಮೊರೆವ ಶಂಖ ಮೃದಂಗ ಭೇರಿಗ
ಳುರುಬಿ ಧಂಧಣಿರೆನಲು ಮಿಗೆ ಮೋ
ಹರಿಸಿತಾ ನಿಸ್ಸಾಳತತಿ ಘನವಾದ್ಯ ಘೋಷಿಸಲು ।೭೩।

ಬಂದು ಹೊಕ್ಕನು ಮಂದಿರವ ನೃಪ
ವೃಂದ ನಲಿಯಲು ಸಕಲ ಜನ ಸಹಿ
ತಂದು ಸಿಂಹಾಸನಕೆ ಬಂದನು ಸಚಿವರೊಗ್ಗಿನಲಿ
ಇಂದುಮುಖಿ ದಮಯಂತಿಯೊಡನಾ
ನಂದದಲಿ ಸಾಮ್ರಾಜ್ಯವಾಳಿದ
ನಂದು ವರಪುರದರಸ ಚೆನ್ನಿಗರಾಯ ಕರುಣದಲಿ ।೭೪।

* * * *

# ನಾಲ್ಕನೆಯ ಸಂಧಿ

ಮರುಗೆ ಪುರುಜನ ಜೂಜಿನಲಿ ಪು
ಷ್ಕರಗೆ ರಾಜ್ಯವ ಸೋತು ನಳಭೂ
ವರನು ನಿಜಸತಿ ಸಹಿತ ಹೊರವಂಟನು ವನಾಂತರಕೆ ॥

ಕೇಳಿದೈ ರಾಜೇಂದ್ರ ಧರ್ಮನೃ
ಪಾಲ ನೈಷಧನತುಳ ಸಂಪದ
ದೇಳಿಗೆಯನೇನೆಂಬೆ ಸಪ್ತದ್ವೀಪದವನಿಪರ
ಮೌಳಿಗಳು ನೃಪನಂಘ್ರಿಕಮಲವ
ನೋಲಗಿಸುತಿಹುದವನ ಕೀರ್ತಿ ಚ
ಡಾಳಿಸಿತು ತ್ರೈಜಗವನವನೀಪಾಲ ಕೇಳೆಂದ ।೧।

ಇಂತೆಸೆವ ಸಂಪತ್ತಿನಲಿ ಭೂ
ಕಾಂತ ನಳಚಕ್ರೇಶನಲಿ ದಮ
ಯಂತಿ ಪಡೆದಳು ಪುತ್ರಕನ ವರಪುತ್ರಿಯೊರ್ವಳನು
ಸಂತಸದೊಳಿರಲಾ ವಿದರ್ಭ ಪು
ರಾಂತರದಿ ನೆರೆದಖಿಳ ಜನ ಭೂ
ಕಾಂತರೊಡನೈತಂದು ಹೊಕ್ಕರು ತಮ್ಮ ನಗರಿಗಳ ।೨।

ಸುರಪನಾಗ ವಿದರ್ಭಪುರವನು
ತೆರಳುತಮರಾವತಿಗೆ ದಿಕ್ಪಾ
ಲರು ಸಹಿತ ನಲವಿಂದೆ ದಮಯಂತಿಯ ಚರಿತ್ರೆಯನು
ಹರುಷಮಿಗೆ ಕೊಂಡಾಡುತೈತರು
ತಿರಲು ಮಾರ್ಗದಿ ಕಂಡರಾ ಕಲಿ
ಪುರುಷನನು ಕುಟಿಲಾತ್ಮಕನ ನಿಸ್ಸಾರಹೃದಯನನು ।೩।

ಕುರುಳು ಜುಂಜುರು ತಲೆಯ ತಗ್ಗಿದ
ಕೊರಳ ಕೆಂಗರಿಗಣ್ಣ ಮೋರೆಯ
ಹರಕು ಗಡ್ಡದ ಕೆಂಚುಮೀಸೆಯ ಮಲಿನವಸನದಲಿ
ನೆರೆದ ವೀರ ಕರಾಳ ಭಟರಿ
ತ್ತೆರದೊಳುಕ್ಕಿನ ತೇರಿನಲಿ ಕಲಿ
ಪುರುಷ ಕಾಣಿಸಿಕೊಂಡನಮರೇಶ್ವರನ ನಸುನಗುತ ।೪।

ಆರು ನೀ ಜಂಭಾರಿಯೋ ಇವ
ರಾರು ಯಮ ವರುಣಾದ್ಯರೋ ಸಂ
ಚಾರವೆತ್ತಲು ನಿಮಗೆಯೆನಲಮರೇಂದ್ರ ನಸುನಗುತ
ತೋರಹತ್ತದೊಳೆಂದ ನಳನಿಗೆ
ನಾರಿ ದಮಯಂತಿಯನು ಮದುವೆಯ
ಧಾರೆಯೆರೆಯಿಸಿ ಬಂದೆವೆನೆ ಖತಿಗೊಂಡ ಕಲಿರಾಯ ।೫।

ಅನಿಮಿಷರು ನೀವಧಿಕ ಬಲರಾ
ವನಿತೆಯನು ಕೈಕೊಳ್ಳಲಾರದೆ
ಜನಪ ನಳನೃಪಗಿತ್ತು ಬಂದಿರೆ ಹರಮಹಾದೇವ
ಎನಗೆ ನೇಮಿಸಿ ಕಳುಹಿ ನಿಮ್ಮಯ
ಮನದ ಬಯಕೆಯ ಸಲಿಸುವೆನು ಕೇ
ಳೆನಲು ಸುರಪತಿ ನಸುನಗುತ ಕಲಿಪುರಷಗಿಂತೆಂದ ।೬।

ಲೇಸನಾಡಿದೆ ಕಲಿಪುರುಷ ನಿನ
ಗೀಸು ಪೌರುಷವುಂಟೆ ನಮಗಿ
ನ್ನಾ ಸರೋರುಹಗಂಧಿಯಲಿ ಮನವಿಲ್ಲ ನಳನೃಪತಿ
ಆ ಸಮಸ್ತ ನೃಪಾಲರಲಿ ಸ
ದ್ಭೂಷಣನು ಶೌರ್ಯೋನ್ನತನು ಕಮ
ಲಾಸನನಿಗಳವಲ್ಲ ನಿನ್ನಲಿ ಹರಿವುದೇನೆಂದ ।೭।

ಎನಲು ಖತಿಗೊಂಡೆಂದ ಕೇಳೆಲೆ
ಅನಿಮಿಷಾಧಿಪ ಎನ್ನನರಿಯಾ
ದಿನಪನಿದಿರಲಿ ತಮದ ಗಾವಳಿಯೇ ಮಹಾದೇವ
ಎನಗೆ ಸರಿಯಾರಿನ್ನು ತಹೆನಾ
ವನಿತೆಯನು ಕುಹಕದಲಿ ನಳಭೂ
ಪನನು ಕೆಡಿಸಿಯೆ ಕಾನನಕೆ ಕಳುಹುವೆನು ನೋಡೆಂದ ।೮।

ಹರಿ ಹರ ಬ್ರಹ್ಮಾದಿ ದೇವರು
ನರರುರಗ ಸುರ ಯಕ್ಷ ಕಿನ್ನರ
ಗರುಡ ಗಂಧರ್ವಾದಿ ಸುಮನಸರೆಲ್ಲರನು ಬಿಡದೆ
ಹುರುಳುಗೆಡಿಸುವೆ ಸಾಕು ನಳಭೂ
ವರನ ಮಾತೇನಿನ್ನು ಲೋಕಾಂ
ತರದೊಳೆದುರಿಲ್ಲೆನಗೆ ನೀವೇನರಿಯಿರೇ ಎಂದ ।೯।

ನಿಮಗೆ ಪೌರುಷವಿಲ್ಲ ನಳನಾ
ಕ್ರಮಿಸಿಕೊಂಡನು ಸತಿಯ ಪುರುಷಾ
ಧಮರು ನಿಮಗಿನ್ನೇಕೆ ಕೊಡಿ ವಟುವೇಷವನು ನಮಗೆ
ಕಮಲಮುಖಿಯನು ನಿಮಗೆ ಪಟ್ಟದ
ರಮಣಿಯನು ಮಾಡುವೆನು ಎಂದು
ಧ್ಭಮಿಸಿ ನುಡಿದನು ಗರ್ವದಲಿ ಕಲಿಪುರುಷ ಸುರಪತಿಗೆ ।೧೦।

ಕೇಳಿ ಕಿವಿ ಮುಚ್ಚಿದರು ಹರಹರ
ಭಾಳಲೋಚನ ಎನುತ ಸಭೆಯಲಿ
ಖೂಳನಾಡಿದ ನುಡಿಗೆ ಸುರಪತಿ ಕನಲಿ ಖತಿಗೊಂಡು
ಬೀಳುಮಾತುಗಳೇಕೆ ನಿನಗಿದು
ನೀಳಮೇಘಶ್ಯಾಮನಿಗೆ ಸಮ
ಪಾಳಿಯೆನಿಸುವ ನಳನೃಪಗೆ ಎರಡೆಣಿಸುವುದೆ ಎಂದ ।೧೧।

ಬವಣೆಯೇಕೆ ಹಿಮಾಂಶುಕುಲ ಸಂ
ಭವನು ಸುಜನಾಧಾರ ನೃಪಕುಲ
ನಿವಹದೊಳು ವಿಖ್ಯಾತ ನಿತ್ಯೋದಾರ ನಿರ್ಮಳನು
ಇವಗೆ ವರವಿತ್ತೆವು ಸದಾ ನೆನೆ
ದವರ ಪಾತಕ ಹರಿವುದಿನ್ನಾ
ಭುವನಪತಿಗೆಣೆಯಾರು ಲೋಕದೊಳೆಂದನಮರೇಂದ್ರ ।೧೨।

ಹಿಡಿಯೆ ಚಲವನು ಹಿಡಿದ ಬಳಿಕದ
ಬಿಡೆನು ಮತವೆನ್ನಲ್ಲಿ ನಿಷಧನ
ನಡುವಿಗಟ್ಟದೆ ಮಾಣೆ ಮಾತಾಡದಿರಿ ನೀವೆನಲು
ಮಿಡುಕಿದರು ಕಡುಪಾಪಿಯಿವ ತಾ
ಬಿಡನೆನುತ ಮನನೊಂದು ಸುರಪತಿ
ತಡೆಯದೈದಿದನಮರಪುರಕವನೀಶ ಕೇಳೆಂದ ।೧೩।

ಇಳಿದನವನೀತಳಕೆ ಖಳಕುಳ
ತಿಳಕನೆಂದನು ತನ್ನ ಭಟರಿಗೆ
ನಳನೃಪನ ಕಟ್ಟುವಡಸಾಧ್ಯವಿದೆನಗೆಯಾತನಲಿ
ಒಲಿದಿಹಳು ಜಯವಧು ಸುಶೀಲತೆ
ನೆಲಸಿದುದು ದುಶ್ಶೀಲ ದುರ್ಗುಣ
ಬಳಸದರಸನೆನುತ್ತ ಹೊಕ್ಕನು ನಿಷಧ ಪಟ್ಟಣವ ।೧೪।

ಮಲ್ಲಿಗೆಯ ವನ ಸಂಪಿಗೆಯ ಬನ
ವೆಲ್ಲ ಕೇತಕಿ ಕುಸುಮಮಯ ಮೆಳೆ
ಯೆಲ್ಲ ರುದ್ರಾಕ್ಷಿಗಳು ಸರಸೀರುಹದ ಕೊಳಗಳವು
ಬೆಲ್ಲವತ್ತಗಳಿಕ್ಷು ದ್ರಾಕ್ಷಿಗ
ಳೆಲ್ಲ ಖರ್ಜೂರಾದಿ ವಸ್ತುಗ
ಳಲ್ಲದಿಲ್ಲ ವೃಥಾ ನೆಲನಿಲ್ಲ ನಳನ ರಾಜ್ಯದಲಿ ।೧೫।

ಇಲ್ಲವೆನ್ನರು ಬೇಡಿದರೆ ಬಿಡ
ರಲ್ಲಿ ಪಾಡಿನ ಪಂಥಗಳ ನುಡಿ
ಯಿಲ್ಲವನೃತವನಾಡರಗ್ಗದ ಸತ್ಯನಿರ್ಮಳರು
ಎಲ್ಲರೊಳಗತಿಹಿತರು ಕ್ರೋಧಗ
ಳಿಲ್ಲದಿಹ ಸದ್ಧರ್ಮಜೀವಿಗ
ಳಲ್ಲಿ ಮೆರೆದರು ಸುಜನರಾ ನಳನೃಪನ ರಾಜ್ಯದಲಿ ।೧೬।

ಪತಿಯರಿಗೆ ವಂಚಿಸರು ಸತಿಯರು
ಸುತರು ಪಿತೃಗಳ ನುಡಿಗಳನು ತಾ
ವತಿಗಳೆಯರಾಚಾರ ವರ್ಣಾಶ್ರಮದ ಧರ್ಮದಲಿ
ಮತಿಯುತರು ಹರಿಭಕ್ತಿಭಾವ
ವ್ರತನಿಯಮ ನಿಷ್ಠೆಯಲಿ ಜನಸ
ಮ್ಮತದೊಳೊಸೆದೊಪ್ಪುವರು ನೈಷಧನೃಪನ ರಾಜ್ಯದಲಿ ।೧೭।

ಅಲ್ಲಿ ತಿರುಗಿದ ಬೀದಿಬೀದಿಗ
ಳಲ್ಲಿ ಪುರಜನವರಿಯದಂತಿರ
ಲಲ್ಲಿ ಮಾಯಾರೂಪಿನಿಂದ ಪಿಶಾಚನಂದದಲಿ
ಸಲ್ಲಲಿತ ಶಿವ ವಿಷ್ಣುಭಕ್ತರಿ
ಗೆಲ್ಲ ನಯವಿದನಾಗಿ ಕುಜನರ
ನೆಲ್ಲ ಕಾಡುವ ಬಂದನರಮನೆಗಾಗಿ ಕಲಿರಾಯ ।೧೮।

ಮುರಿದು ನೋಡಿದನಲ್ಲಿ ತೆಂಗಿನ
ಮರಗಳುನ್ನತ ವಿವಿಧವೃಕ್ಷದ
ಹೊರಿಗೆಯಲಿ ಕಣ್ಗೆಸೆವ ನಗರೋದ್ಯಾನ ವೀಧಿಯಲಿ
ಉರುತರದೊಳಿಹ ಅರ್ಕಪತ್ರದ
ತರುವಿನಗ್ರದೊಳಿರ್ದ ಬಹುದಿನ
ವರಸ ಕೇಳ್ ಕಲಿಪುರುಷನಿತ್ತಲು ರಾಜಭವನದಲಿ ।೧೯।

ಕರೆಸಿದನು ನಳನೃಪತಿ ಮುನಿಮು
ಖ್ಯರನು ಭೂಸುರವರ್ಗವನು ಸ
ತ್ಕರಿಸಿ ಜಪ ತಪ ಹೋಮ ಯಜ್ಞಾದಿಗಳನನುಗೊಳಿಸಿ
ಸುರರ ಸಂತರ್ಪಣೆಯೊಳಿರುತಿಹ
ನರಸನನುದಿನ ಪೂರ್ವಜನ್ಮಾಂ
ತರದ ಫಲವದನರಿಯೆ ಬಂದುದು ಕಾಲಗತಿ ನೃಪಗೆ ।೨೦।

ಒಂದು ದಿವಸದೊಳಾಗ ನೃಪನಿಗೆ
ಬಂದುದಲ್ವಾಚಮನ ಕಾಲದೊ
ಳಂದು ಶುದ್ಧಾಚಮನವಿಲ್ಲದೆ ನಿಂದು ನೀರ್ಗುಡಿಯೆ
ಇಂದು ತನಗಿದೆ ಸಮಯವೆಂದಾ
ನಂದದಲಿ ಕಲಿಪುರುಷ ರಾಯನ
ಸಂಧಿಸಿದ ವಿಧಿವಶವ ತಪ್ಪಿಸಲಾರ ಹವಣೆಂದ ।೨೧।

ಕಪಟ ಭೂಸರ ವೇಷದಲಿ ನಿ
ಷ್ಕಪಟ ನಳಭೂವರನ ಕೆಡಿಸುವ
ಯುಪಮೆಯನು ತಾ ನೆಗಳಿ ಬಂದನು ಪುಷ್ಕರನ ಹೊರೆಗೆ
ನಿಪುಣನೆಂದನು ನಿನಗೆ ನಳಭೂ
ಮಿಪನು ಸಖನೆನೆ ಕೇಳಿ ಬಂದಿಹೆ
ನಪಯಶಕೆ ಹೆದರದಿರು ನಿನಗಹುದಖಿಳಸಾಮ್ರಾಜ್ಯ ।೨೨।

ಬಲ್ಲೆಯಾ ನೀನೆನ್ನ ಲೋಕಕೆ
ಬಲ್ಲಿದನು ತಾ ಕಲಿಪುರುಷ ನಳ
ನಲ್ಲಿ ದ್ಯೂತವನಾಡಿ ಗೆಲಿಸುವೆ ನಿನ್ನ ನೆತ್ತದಲಿ
ಒಲ್ಲೆನೆನದಿರು ಸಕಲರಾಜ್ಯದ
ವಲ್ಲಭನ ಮಾಡುವೆನು ನಡೆ ಹುಸಿ
ಯಿಲ್ಲ ನಿಷಧನ ಕಿತ್ತು ಬಿಸುಡುವೆ ನಂಬು ನೀನೆಂದ ।೨೩।

ನಂಬಿದನು ಲೇಸಾಗಿ ಭಾಷೆಯ
ನಿಂಬುಗೊಂಡುದು ಹೃದಯ ಪುಷ್ಕರ
ನೆಂಬ ಖಳ ಸಂತೋಷದಲಿ ಕಲಿಪುರುಷನೊಡಗೊಂಡು
ಅಂಬುಜಾಕ್ಷನ ಕಳೆಗೆ ತಾ ಪ್ರತಿ
ಬಿಂಬನೆನಿಸುವ ನಳನ ಬಳಿಗತಿ
ಸಂಭ್ರಮದೊಳೈತಂದರಿಬ್ಬರು ರಾಯನೋಲಗಕೆ ।೨೪।

ಮಿಸುನಿ ರತ್ನಪ್ರಭೆಗಳಲಿ ರಂ
ಜಿಸುವ ಮಂಟಪದೊಳಗೆ ರಾಜ
ಪ್ರಸರಸಹಿತವನೀಶನಿದ್ದನು ಸಿಂಹಪೀಠದಲಿ
ಶಶಿಮುಖಿಯರೆಡಬಲದಿ ಕೈವಾ
ರಿಸುತ ಸಿತಚಾಮರವ ಚಿಮ್ಮಲು
ನಸುನಗುತ ಕೈಮುಗಿದು ಪುಷ್ಕರನೆಂದನಾ ನಳಗೆ ।೨೫।

ಅರಸ ಕೇಳೀ ವಿಪ್ರನತಿ ಭಾ
ಸುರ ಸುತೇಜದೊಳೆಸೆವ ನೆತ್ತವ
ನೆರಡ ಕಾಣಿಕೆಗೊಟ್ಟ ನನಗಿದರಲ್ಲಿ ಮನವಾಯ್ತು
ಹರವು ಹಾಸಂಗಿಗಳನಾಡುವೆ
ವಿರದೆ ಸೋತವನಾವನಾಗಲಿ
ಧರೆಯನುಳಿದು ವನಾಂತರಕೆ ತೆರಳುವುದು ಸತಿಸಹಿತ ।೨೬।

ಧರಣಿಪತಿ ನಿನಗಿನಿತು ಚಿತ್ತಕೆ
ಹರುಷವಾಗಿರಲಿನ್ನು ಮನದಲಿ
ಕೊರತೆದೋರಲು ಮಾಣು ಇದು ಪಾರ್ಥಿವರ ಪಂಥ ಕಣಾ
ಧುರಕೆ ಬೇಂಟೆಗೆ ಜೂಜಿಗೆಂದಡೆ
ಕರೆದಡೋಸರಿಸುವುದು ನೀತಿಯೆ
ನಿರುತವಿದು ಚಿತ್ತೈಸು ಎಂದನು ನೃಪಗೆ ಕೈಮುಗಿದು ।೨೭।

ಮೇದಿನೀಪತಿ ಕೇಳು ಸಜ್ಜನ
ಸಾಧು ಬಲ್ಲನೆ ನಳನ ಹೃದಯವ
ನಾ ದುರಾತ್ಮನ ನುಡಿಯ ಕೈಕೊಂಡಾಡಿದನು ನೃಪತಿ
ಭೇದದಲಿ ಕಲಿಪುರುಷ ಮಾಯೋ
ಪಾಧಿಯಲಿ ಪುಷ್ಕರನ ಜೂಜಿನ
ವಾದದಿಂದರೆಗಳಿಗೆಯಲಿ ಗೆಲಿಸಿದನು ವಸ್ತುಗಳ ।೨೮।

ದುಗನು ಪಂಚಗ ಬಾರವೆರಡಿ
ತ್ತಿಗೆಯ ಬೇಡಿದಡಲ್ಲಿ ಬೀಳ್ವುದು
ವಿಗಡ ಪುಷ್ಕರನೃಪನು ಗೆಲಿದನು ಹಲಗೆಯೊಂದರಲಿ
ಬಗೆಬಗೆಯ ರತ್ನಗಳ ಧನ ಧಾ
ನ್ಯಗಳ ಗಜ ರಥ ತುರಗ ಮೊದಲಾ
ದಗಣಿತ ಸುವಸ್ತುಗಳ ಸೋತನು ನೃಪತಿ ಪುಷ್ಕರಗೆ ।೨೯।

ಆಡಿದನು ಜೂಜಿನಲಿ ನೃಪ ಹೋ
ಗಾಡಿದನು ರಾಜ್ಯವನು ಕೋಶವ
ಕೇಡುಗರ ಕೈ ಮೇಳವಿಸಿದುದು ದೈವಗತಿಯಿಂದ
ಬಾಡಿತರಸನ ವದನ ಸಭೆಯಲಿ
ನೋಡಿದರು ಸಜ್ಜನರು ಮರುಗಿದ
ರಾಡಲೇನದನರಸ ಸೋತನು ವಿಧಿಯ ಘಟನೆಯಲಿ ।೩೦।

ತೀರಿತಿನ್ನೇನವನಿಪತಿ ಭಂ
ಡಾರವಸ್ತು ಸುವಸ್ತುವೆಲ್ಲವು
ಸೇರಿತೆನಗಿಂದಿನಲಿ ಪಣವೇನಿನ್ನು ಪೇಳೆನಲು
ಭೂರಮಣ ಚಿಂತಿಸಿದ ಮನದಲಿ
ನಾರಿಯಳನೊಡ್ಡುವೆನು ಸೋತಿಹ
ಧಾರಿಣಿಯ ನೆರೆ ಗೆಲುವೆನೆನ್ನುತ ತನ್ನ ಮನದೊಳಗೆ ।೩೧।

ಅರಸನಾಪ್ತಪುರೋಹಿತನು ಮನ
ಹರುಷವಳಿದೆಯ್ತಂದನಂತಃ
ಪುರವ ಹೊಕ್ಕನು ರಾಜವದನೆಯ ಸಭೆಗೆ ತಾ ಬಂದು
ತರುಣಿಯರ ಮೇಳದಲಿ ಶೋಭಿಪ
ಪರಮರತ್ನದ ಪೀಠದಲಿ ತಾ
ಹರುಷಮಿಗೆ ರಂಜಿಸುವ ಸತಿಯಳ ಕಂಡು ಕೈಮುಗಿದು ।೩೨।

ತಾಯೆ ಬಿನ್ನಹವಿಂದು ನಿಮ್ಮಯ
ರಾಯ ಸೋತನು ಜೂಜಿನಲಿ ನಿ
ರ್ದಾಯದಲಿ ಪುಷ್ಕರನು ಗೆಲಿದನು ಸಕಲರಾಜ್ಯವನು
ನೋಯಲಾಗದು ಚಿತ್ತದಲಿ ನೆರೆ
ಬೀಯವಾದುದು ಸಿರಿಯು ಇನ್ನಿದ
ರಾಯತವ ನೀವ್ ಬಲ್ಲಿರೆಂದನು ವಿಪ್ರ ಕೈಮುಗಿದು ।೩೩।

ಕಮಲವನದಲಿ ಮಂಜು ಸುರಿದಾ
ಕ್ರಮದ ಬಗೆಯಲಿ ಸತಿಯಳಿಗೆ ಮುಖ
ಕಮಲ ಬಾಡಿತು ನುಡಿಯ ಕೇಳುತ ಮನದ ಚಿಂತೆಯಲಿ
ಕಮಲನಾಭನ ಕರುಣ ಕವಚವು
ಸಮೆದರಾರೇಗುವರು ಹರಹರ
ಕುಮತಿ ಪುಷ್ಕರನಿಂತು ಮುನಿದನೆ ಎನುತ ಮರುಗಿದಳು ।೩೪।

ಕಮಲಮುಖಿ ನಳನೃಪಗೆ ರಾಜ್ಯ
ಭ್ರಮಣವಾಯಿತೆ ಎನುತ ಸತಿ ಭೂ
ರಮಣನೆಡೆಗೈತಂದು ಕಂಡು ಕಾಂತನಿಂಗಿತವ
ತಮದ ರಾಹುಗ್ರಹವು ಸೋಂಕಿದ
ದ್ಯುಮಣಿಯಂತಿರೆ ಕಂಡು ಧೈರ್ಯದಿ
ಕಮಲಮುಖಿ ಕೈಮುಗಿದು ಬಿನ್ನೈಸಿದಳು ನಿಜಪತಿಗೆ ।೩೫।

ಶಶಿಕುಲಾಂಬುಧಿಚಂದ್ರ ರಿಪುನೃಪ
ನಿಶಿತ ಭಾಸ್ಕರತೇಜ ನಿಮಗೀ
ವ್ಯಸನ ತೋರಿತೆ ಜೂಜಿನಲಿ ಶಿವಶಿವ ಮಹಾದೇವ
ಬಿಸರುಹಾಕ್ಷನ ಕರುಣವಿದು ಸೋ
ಲಿಸಿದನೇ ಪುಷ್ಕರನು ಇದು ವಿಧಿ
ವಶವಲಾ ತಪ್ಪೇನು ಸಾಕಿನ್ನೆಂದಳಿಂದುಮುಖಿ ।೩೬।

ಲಲನೆಯಾಡಿದ ನುಡಿಗೆ ಸಭೆಯವ
ರಳಲಿ ಬೈದರು ಪುಷ್ಕರನೆ ಕೇ
ಳೆಲವೊ ಬಾಹಿರ ಸಾಕು ತೆಗೆ ಚಾರಿಗಳನೆಂದೆನುತ
ಹೊಲಬುದಪ್ಪಿದ ಹುಲ್ಲೆ ಬೇಡನ
ಬಲೆಗೆ ಬಿದ್ದಂತಾಗೆ ನಳನೃಪ
ತಿಲಕನೆಂದನು ಮನದ ದುಗುಡದಿ ತನ್ನ ನಿಜಸತಿಗೆ ।೩೭।

ತರುಣಿ ಕೇಳಪಜಯದ ನಾರಿಯ
ಸೆರಗ ಹಿಡಿದೆನು ರಾಜ್ಯಲಕ್ಷ್ಮಿಯ
ಪರರಿಗಿತ್ತುಳುಹಿದೆನು ದೇಹವನಿದಕೆಯಂಜದಿರು
ತರುಣಿ ನೀ ಕಾನನದಿ ಗಿರಿಗ
ಹ್ವರಗಳಲಿ ಬಿಡದೆಂತು ತೊಳಲುವೆ
ಹರಹರಾಯೆಂದೆನುತ ಸತಿಯನು ನೋಡಿ ಬಿಸುಸುಯ್ದ ।೩೮।

ಚಿತ್ತವಿಸು ಶಶಿಕುಲಶಿರೋಮಣಿ
ಹೆತ್ತವರು ಸತಿಸುತರು ಮನೆ ಮನೆ
ವಾರ್ತೆ ಬಾಂಧವ ಧರಣಿಪರ ಭೋಗ್ಯೈಕಸಂಪದವು
ನಿತ್ಯವಲ್ಲ ಶರೀರಸುಖಗಳ
ನಿತ್ಯವೆಂಬುದ ತಿಳಿಯುತೀ ನಿಜ
ಸತ್ಯವನು ಕೈಹಿಡಿದು ಸಲಹೆಂದಳು ಸರೋಜಮುಖಿ ।೩೯।

ಚಿಂತೆ ಬೇಡೆಂದರಸನನು ಸತಿ
ಸಂತವಿಟ್ಟಳು ನೀತಿಯಲಿ ದಮ
ಯಂತಿ ನಿಜಮಂದಿರಕೆ ಸರಿಯಲು ಕಂಡು ಪುಷ್ಕರನು
ಇಂತು ಜೂಜಲಿ ಸೋತು ತಿರುಗಿ
ನ್ನೆಂತು ರಾಜ್ಯದಿ ನಿಲುವಿರೆನೆ ಭೂ
ಕಾಂತ ವನವಾಸಕ್ಕೆ ನಿಜಸತಿ ಸಹಿತಲನುವಾದ ।೪೦।

ತಳಿತ ಮಣಿಭೂಷಣಗಳೆಲ್ಲವ
ಕಳಚಿ ಬಿಸುಟನು ಗುರುವಿನಂಘ್ರಿಗೆ
ನಳಿನಮುಖಿಸಹಿತೆರಗಿ ಹೊರವಂಟನು ನಿಜಾಲಯವ
ಬಳಿಕಲೈದಿದರಖಿಳಪುರಜನ
ಜಲದ ಕಣ್ಗಳ ಧಾರೆಯಲಿ ಗಾ
ವಳಿ ಮಸಗಿ ಮಿಗೆ ಶೋಕರವ ತುಂಬಿದುದು ಪಟ್ಟಣವ ।೪೧।

ಸಾಕು ಕಂಬನಿಗಳಲಿ ನನೆದರು
ಊಳಿಗದ ಪರಿಜನರು ಮಂತ್ರಿಗ
ಳೋಲಗದ ಸಾಮಂತ ಸಚಿವರು ಮಲ್ಲ ಗಾಯಕರು
ಬಾಲೆಯರು ಬಾಲಕರು ಪುರಜನ
ಜಾಲವೆಲ್ಲವು ಶೋಕದಲಿ ಕ್ಷಿತಿ
ಪಾಲನರಸಿಯ ಕಂಡು ಮರುಗಿತು ಮಂದಿ ಗೋಳಿಡುತ ।೪೨।

ಮನದಿ ಮುನ್ನವೆ ತಿಳಿದು ನೃಪಸತಿ
ತನಯರನು ರಥದೊಳಗೆ ತಂದೆಯ
ಮನೆಗೆ ಕಳುಹಿದಳಾಪ್ತರೊಡನೆ ವಿದರ್ಭಪಟ್ಟಣಕೆ
ಜನಪ ಕೇಳಿತ್ತಲು ಮಹಾರೋ
ದನದಿ ಪಟ್ಟಣವೆಲ್ಲ ಮರುಗಲು
ವನಿತೆ ಪತಿಯೊಡನೈದಿದಳು ನಿಜಭಾವ ಶುದ್ಧಿಯಲಿ ।೪೩।

ಏನನೆಂಬೆನು ಜೀಯ ಲೋಕದ
ಮಾನಿನಿಯೆ ದಮಯಂತಿ ಸತ್ಯ
ಜ್ಞಾನಿಯಲ್ಲಾ ಸತಿಯರಿಗೆ ಗುರು ಪತಿವ್ರತಾಗುಣದಿ
ಮೌನದಲಿ ಪತಿಯಂಘ್ರಿಕಮಲ
ಧ್ಯಾನದಲಿ ಮನಸಂದು ಘನಸತಿ
ಕಾನನಕೆ ಗಮಿಸಿದಳು ವರಪುರದರಸನಾಜ್ಞೆಯಲಿ ।೪೪।

* * * *

# ಐದನೆಯ ಸಂಧಿ

ಅಡವಿಯಲಿ ಪತಿ ಕಳೆದುಬಿಡೆ ಫಣಿ
ಯೊಡಲಿಗಿಳಿಯದೆ ಮುಂದೆ ಕರಿಗಳ
ಪಡೆಗೆರಗಿ ದಮಯಂತಿ ಹೊಕ್ಕಳು ಚೈದ್ಯನಗರಿಯನು ॥

ಕೇಳು ಕುಂತೀತನಯ ನಳನೃಪ
ಬೀಳುಕೊಟ್ಟನು ಪುರವನಲ್ಲಿಂ
ಮೇಲೆ ನಡೆದರು ಪಯಣಗತಿಯಲಿ ಹಲವು ಯೋಜನವ
ಹೇಳಲೇನದನವರ ವಿಧಿಯನು
ತಾಳಿಗೆಗಳೊಣಗಿದವು ಸತಿಯಳ
ಕಾಲೊಡೆದು ಸುರಿವರುಣಜಲದಲಿ ಬಟ್ಟೆ ಕೆಸರಾಯ್ತು ।೧।

ಎಳೆಯ ಬಾಳೆಯ ಸುಳಿಯು ಅನಲನ
ಜಲದ ಹೊಯ್ಲಲಿ ನೊಂದವೊಲ್ ಕಡು
ಬಳಲಿದಬಲೆಯ ಕಂಡು ನೃಪ ಮರುಗಿದನು ಮನದೊಳಗೆ
ಲಲಿತ ಹೇಮದ ತೂಗುಮಂಚದ
ಹೊಳೆವ ಮೇಲ್ವಾಸಿನಲಿ ಮಲಗುವ
ಲಲನೆಗೀ ವಿಧಿ ಬಂದುದೇ ಹಾಯೆನುತ ಬಿಸುಸುಯ್ದ ।೨।

ಮರುಗಲಿನ್ನೇಕರಸ ಬಿಡು ವಿಧಿ
ಬರೆದ ಬರೆಹವ ತಪ್ಪಿಸಲು ಹರಿ
ಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು
ಹರೆವುದಾಕ್ಷಣ ತುಂಬುವುದು ಗೋ
ಚರಿಸುವುದು ಸಿರಿ ನಿತ್ಯವೇನಿದ
ನರಿಯದವನೇ ನೋಯಲೇಕೆಂದಳು ಸರೋಜಮುಖಿ ।೩।

ನುಡಿಯ ಕೇಳುತ ಮನದಿ ಮಿಡುಕುತ
ಪೊಡವಿಪತಿ ಸತಿಸಹಿತ ಘನಘೋ
ರಡವಿಯಲಿ ಬರುತಿರೆ ಜಗನ್ಮೋಹನದ ಪಕ್ಷಿಗಳು
ಪೊಡವಿಗಿಳಿಯಲು ಕಂಡಪೇಕ್ಷಿಸಿ
ಪಿಡಿವೆನೆಂದುರವಣಿಸಿ ನೃಪ ಹ
ಚ್ಚಡವ ಬೀಸಿದಡದನು ಕೊಂಡೊಯ್ದುವು ನಭಸ್ಥಳಕೆ ।೪।

ಮೂಗಿನಲಿ ಬೆರಳಿಟ್ಟು ಮಕುಟವ
ತೂಗಿದನು ನಸುನಗುತ ನಿಂದಿರ
ಲಾಗ ಸೂಚಿಸಿದವು ನಿರಂತರ ರಾಜ್ಯಭೋಗವನು
ಬೇಗದಿಂದಪರಿಹರಿಸಿಕೊಂಡವ
ರೀಗವಾವಿದನರಿದಿರೆಂದು ಸ
ರಾಗದಿಂದಲಿ ಮಾಯವಾದವು ಪಕ್ಷಿಯುಗಳಗಳು ।೫।

ಧರಣಿಪತಿ ಕೇಳ್ ನಿಷಧಪತಿ ಕಲಿ
ಪುರುಷ ಮಾಯವ ಬಲ್ಲನೇ ಮನ
ಮರುಗಿ ನಿರ್ವಾಣದಲಿ ನಿಂದಿರಲಾಗ ಸತಿ ಕಂಡು
ಹರಹರಾ ಎನುತಾಗ ಸೀರೆಯ
ಸೆರಗನರಿದಿತ್ತಳು ನೃಪಾಲಗೆ
ಶಿರವ ನಸುಬಾಗಿದನು ನಾಚಿಕೆಯಾಗಲಿಂತೆಂದ ।೬।

ಧರೆಯ ನೃಪರಿಗೆ ನಿಷಧಪುರಪತಿ
ಯರಮನೆಯ ಬಾಗಿಲಿನ ಸುಮುಖವು
ದೊರಕಲದು ತಾ ಪುಣ್ಯವೆಂಬೀಯರಸುತನ ನಮಗೆ
ಹರೆದುದೆಲ್ಲ ಸಮಸ್ತ ರಾಜ್ಯದ
ಸಿರಿಗೆ ಬಾಹಿರನಾಗಿ ಸತಿಯಳ
ಸೆರಗನುಡುವಂತಾಯ್ತೆ ಹರಹರಾ ಎನುತ ಬಿಸುಸುಯ್ದ ।೭।

ಧರೆಯ ಸಂಪದದಷ್ಟ ಭೋಗವ
ಪರಿಹರಿಸಿ ನಿಜಪುತ್ರಮಿತ್ರರ
ತೊರೆದು ನಂಬಿದ ಸತಿಯ ಘೋರಾರಣ್ಯ ಮಧ್ಯದಲಿ
ಹಿರಿದು ಬಳಲಿಸಿ ನೋಯಿಸಿದೆ ಕೇಳ್
ತರುಣಿ ಎನ್ನವೊಲಾರು ಪಾಪಿಗ
ಳಿರದೆ ನೀ ಹೋಗಿನ್ನು ತಂದೆಯ ಮನೆಗೆ ನಡೆಯೆಂದ ।೮।

ಇನಿಯನಾಡಿದ ನುಡಿಗೆ ಅಂಗನೆ
ಕನಲಿ ನುಡಿದಳು ಶೋಕದಲಿ ನೀ
ನಿನಿತು ಮುನಿದಾಡುವರೆ ಸಾಕಿನ್ನಾರು ಗತಿಯೆನಗೆ
ಅನುದಿನವು ನಾ ನಿಮ್ಮ ಪದಯುಗ
ವನಜವನು ಭಜಿಸುವುದ ತೊರೆದೀ
ತನುವ ಸೈರಿಸಲಾಪೆನೇ ಹೇಳೆಂದಳಿಂದುಮುಖಿ ।೯।

ನೆಳಲು ತನುವಿನ ಬಳಿಯೊಳಲ್ಲದೆ
ಚಲಿಸುವುದೆ ತಾ ಬೇರೆ ನಿಮ್ಮಡಿ
ನಳಿನದಲಿ ಸುಖದುಃಖವಲ್ಲದೆ ಬೇರೆ ಗತಿಯುಂಟೆ
ಹಳುವವೇ ಸಾಮ್ರಾಜ್ಯ ನಿಮ್ಮಡಿ
ನೆಳಲಿನಲಿ ತಾನಿರುವೆನಲ್ಲದೆ
ನಿಳಯವೇ ನನಗಡವಿಯೆಂದೆರಗಿದಳು ಪದಯುಗಕೆ ।೧೦।

ಎನುತ ಸುರಿದಳು ಕಣ್ಣಿನಲಿ ಕಂ
ಬನಿಯ ಮಿಡಿದಳು ಬೆರಳಿನಲಿ ಮು
ನ್ನಿನಲಿ ಮಾಡಿದ ಕರ್ಮಫಲವಿದಕೇನ ಮಾಡುವುದು
ಎನಗೆ ಚಿಂತಿಸಲೇಕೆ ನೀನಿಂ
ದಿನಲಿ ನಿರ್ಮಲ ಚಿತ್ತದಲಿ ಕಾ
ನನವ ಸಂಚರಿಸುವೆನು ನಿಮ್ಮೊಡನೆಂದಳಿಂದುಮುಖಿ ।೧೧।

ಶೋಕವೇಕೆಲೆ ತರುಣಿ ಬಾರೆಂ
ದಾ ಕಮಲಲೋಚನೆಯ ತೋಳಿನೊ
ಳೌಕಿ ಬಿಗಿಯಪ್ಪಿದನು ಸೆರಗಿನೊಳೊರಸಿ ಕಂಬನಿಯ
ಜೋಕೆಯಲಿ ಕುಳ್ಳಿರಿಸಿ ತೊಡೆಯೊಳ
ನೇಕ ಪ್ರೀತಿಯೊಳೆಂದ ನೀನವಿ
ವೇಕಿಯೇ ಬಿಡು ಮನದ ದುಗುಡವನೆಂದನಾ ನೃಪತಿ ।೧೨।

ಎಂದು ಸತಿಯಳ ಸಂತವಿಟ್ಟರ
ವಿಂದನಾಭಧ್ಯಾನದಲಿ ಬರೆ
ಮುಂದೆ ಘೋರಾರಣ್ಯವೆಸೆದುದು ಘನಭಯಂಕರದಿ
ಸಂದ ಖಗ ಮೃಗವಲ್ಲಿ ನೆರೆದಿರೆ
ಬಂದು ಹೊಕ್ಕರು ಕಾನನವನರ
ವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ ।೧೩।

ಲೋಕಕಧಿಪತಿ ನಳನ ರಾಣಿಗೆ
ಶೋಕ ಪರ್ಬಿದ ತೆರದಿ ಕತ್ತಲೆ
ಲೋಕವನು ಮುಸುಕಿದುದು ಭರಣಿಯ ಮುಚ್ಚುವಂದದಲಿ
ಭೀಕರಧ್ವನಿಗಳಿಗೆ ಹೆದರಿದ
ಳಾ ಕಮಲಲೋಚನೆಯ ಕಂಡು ವಿ
ವೇಕನಿಧಿ ಸಂತಯಿಸಿ ಬಿಗಿಯಪ್ಪಿದನು ತೂಪಿರಿದು ।೧೪।

ತರುಣಿಯಂಜದಿರಂಜದಿರು ವಿಧಿ
ಬರೆದ ಬರೆಹವಿದೆನುತ ವೃಕ್ಷದ
ತರಗೆಲೆಯ ಹಾಸಿನಲಿ ಮಲಗಿಸಿ ಸತಿಯನೀಕ್ಷಿಸುತ
ವರರತುನ ಮಂಚದಲಿ ಪವಡಿಸಿ
ಪರಮ ಸುಖವಿಹ ಸತಿಗೆ ವಿಧಿಯಿದು
ಹರಹರಾಯೆನುತರಸ ಕಂಬನಿದುಂಬಿದನು ಮರುಗಿ ।೧೫।

ಎಲ್ಲರೋಪಾದಿಯ ಪತಿವ್ರತೆ
ಯಲ್ಲವೀ ದಮಯಂತಿ ಬಿಡುವವ
ಳಲ್ಲ ತನ್ನನು ತರುಣಿ ಕಾಣದ ಕಡೆಗೆ ತೆರಳಿದರೆ
ಅಲ್ಲಿ ತಂದೆಯ ಮನೆಗೆ ಹೋಗುವ
ಳಿಲ್ಲಿ ತಾನಿರೆ ಬಿಡಳೆನುತ ಮನ
ದಲ್ಲಿ ಯೋಚಿಸಿ ನಿದ್ರೆಗೈಸಿದನಾ ಮಹಾಸತಿಯ ।೧೬।

ಮರೆದು ಮಲಗಿದಳವಳ ಮಗ್ಗುಲ
ಸೆರಗ ಮೆಲ್ಲನೆ ಜಾರಿಸುತಲಾ
ಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ
ಮರುಗಿದನು ಮನದೊಳಗೆ ಹರಿಹರಿ
ವರ ಜಗತ್ಪತಿ ಅಡವಿಯಲಿ ಎ
ಚ್ಚರಿಸದೇ ತಾನೆಂತು ಪೋಗುವೆನೆನುತ ಬಿಸುಸುಯ್ದ ।೧೭।

ಮಡದಿಯಗಲಿದ ಬಳಿಕ ಹತ್ತೆಂ
ಟಡಿಯ ದಾಂಟುವ ಮರಳಿ ನಿಜಸತಿ
ಯೆಡೆಗೆ ತಿರುಗುವ ಚಂದ್ರಬಿಂಬಾನನೆಯನೀಕ್ಷಿಸುವ
ಅಡಸಿ ಬರೆ ದುಃಖದಲಿ ಮೆಲ್ಲಡಿ
ಯಿಡುತ ಸತಿಯನು ನೋಡಿ ಮನದು
ಗ್ಗಡದ ಶೋಕದಿ ನಡೆದ ನಳನೃಪನೊಂದು ಯೋಜನವ ।೧೮।

ಮರುಗುವುದು ಮನವೊಮ್ಮೆ ಕಂಗಳು
ಮರಳಿ ನೋಡುವುದೊಮ್ಮೆ ಸತಿಯಳ
ಯಿರವ ಕಾಣದೆ ಕಳವಳಕೆ ಬೀಡಾದುದಾ ಹೃದಯ
ಕರಗಿತರಸನ ಧೈರ್ಯ ಚಿತ್ತದಿ
ಮುರಿದುದಗ್ಗದ ಮಹಿಮೆ ಶೋಕದ
ಹೊರಿಗೆಯಲಿ ಕಾತರಿಸಿ ನಡೆದನು ನೃಪತಿ ಕೇಳೆಂದ ।೧೯।

ಕರುಣೆದೋರದೆ ನೃಪತಿ ಸತಿಯಳ
ತೊರೆದು ಬಿಸುಟನು ವನದೊಳಗೆ ಹುಲಿ
ಕರಡಿ ಮೃಗದುಪಟಳವ ತಾನಿನ್ನೆಂತು ಸೈರಿಪಳೊ
ಮೊರೆಯ ಲಾಲಿಸಿ ನೋಳ್ಪೆನೆಂದುರು
ತರದ ಪ್ರೇಮದಿ ಬಂದು ಸತಿಗೆ
ಚ್ಚರಿಸುವಂದದಿ ತರಣಿ ತಲೆದೋರಿದನು ಪೂರ್ವದಲಿ ।೨೦।

ನಳಿನಮುಖಿ ಮೈಮುರಿದ ನಿದ್ರೆಯ
ತಿಳಿದು ಮೆಲ್ಲನೆ ನೋಡಿದಳು ಎಡ
ಬಲವನೀಕ್ಷಿಸಿ ಪತಿಯ ಕಾಣದೆ ಬಲಿದ ಮೂರ್ಛೆಯಲಿ
ಮಲಗಿದಳು ಮೈಮರೆದು ನಿಮಿಷಕೆ
ತಿಳಿದು ಕಾಣದೆ ಕಾತುರದಿ ಹಂ
ಬಲಿಸಿ ಹಲುಬಿದಳಲ್ಲಿ ಗಿರಿ ತರು ನಿಕರ ಮಧ್ಯದಲಿ ।೨೧।

ಹಾ ರಮಣ ನಳನೃಪತಿ ಹಾ ರಣ
ಧೀರ ಸದ್ಗುಣಹಾರ ರಿಪುಸಂ
ಹಾರ ನಿತ್ಯೋದಾರ ನಿರ್ಮಳ ಸತ್ಯಸಂಚಾರ
ಘೋರ ಕಾನನದೊಳಗೆ ನಂಬಿದ
ನಾರಿಯನು ಬಿಸುಡವರೆ ತನಗಿ
ನ್ನಾರು ಗತಿ ಮುಖದೋರೆನುತ ಹಲುಬಿದಳು ದಮಯಂತಿ ।೨೨।

ಪೊಡವಿಗಿಳಿವೆನೊ ಹಾಯ್ದು ಪಾವಕ
ನೊಡಲ ಹೊಗುವೆನೊ ಕಾಳಕೂಟದ
ಮಡುವಿನೊಳು ಮುಳುಗುವೆನೊ ಪಾಸರ ಮೇಲೆ ಬೀಳುವೆನೊ
ಅಡಸಿದಾಪತ್ತಿನಲಿ ಗರಳವ
ಕುಡಿವೆನೋ ತಾನೆನುತ ಸತಿ ಬಾ
ಯ್ಬಿಡುತ ಕಾನನದೊಳಗೆ ತಿರುಗಿದಳಬಲೆ ಶೋಕದಲಿ ।೨೩।

ಕಾಣಿರೇ ಅರಸಂಚೆಗಳೆ ನೀವ್
ಕಾಣಿರೇ ನಿಜಪತಿಯ ಶುಕ ಪಿಕ
ಕಾಣಿರೇ ಮೃಗ ಪಕ್ಷಿಗಳೆ ನಳಚಕ್ರವರ್ತಿಯನು
ಕಾಣಿರೇ ತರುಲತೆಗಳಿನಿಯನ
ಕಾಣಿರೇ ನೀವೆಂದು ಶೋಕದೊ
ಳೇಣ ಲೋಚನೆ ಹಲುಬಿದಳು ಹಲವಂಗದಲಿ ಪತಿಯ ।೨೪।

ಮುಡಿಕೆದರಿ ಹುಡಿಯೊಳಗೆ ಹೊರಳುತ
ಲೊಡಲನೀಡಾಡಿಗಳು ಧರೆಯೊಳ
ಗಡವಿ ಪಾಲಾಗೆಂದು ಪಡೆದಳೊ ತನ್ನ ನಿಜಜನನಿ
ಮಡದಿಯರು ತನ್ನಂತೆ ಲೋಕದೊ
ಳೊಡಲ ತೆತ್ತವರುಂಟೆ ಶೋಕದಿ
ಪೊಡವಿಪತಿ ಮುಖದೋರೆನುತ ಹಂಬಲಿಸಿದಳು ಪತಿಯ ।೨೫।

ಮಾನವಾಧಿಪ ಕೇಳು ಬನದಲಿ
ಮಾನಿನಿಗೆ ಮತ್ತೊಂದು ಕಂಟಕ
ಹಾನಿ ಬಂದುದನೇನನೆಂಬೆನು ಪತಿಗೆ ಬಾಯ್ಬಿಡುತ
ಕಾನನದ ಬಳಿವಿಡಿದು ಬರೆ ಸು
ಮ್ಮಾನದಲಿ ತರಗೆಲೆಯ ಹಕ್ಕೆಯ
ಮೌನದಲಿ ಉರಗೇಂದ್ರನಿದ್ದನು ಬಲಿದ ನಿದ್ರೆಯಲಿ ।೨೬।

ತರಳೆ ಕಾಣದೆ ಬರುತ ಮೆಟ್ಟಿದ
ಳುರಗಪತಿಯನು ಕೋಪದಲಿ ಮಿಗೆ
ಸುರಿವ ಗರಳದಿ ರೌದ್ರಮಯ ರೂಪಿನಲಿ ಬಾಲಕಿಯ
ತರುಬಿ ಹಿಡಿದುದು ತವಕದಲಿ ಹಿಮ
ಕರನ ನುಂಗುವ ರಾಹುವಿನವೊಲ್
ಅರಸ ಕೇಳಂಗನೆಯ ವಿಧಿಯನು ಹೇಳಲೇನೆಂದ ।೨೭।

ಹಾ ರಮಣ ನಳನೃಪತಿ ತನ್ನನ
ದಾರಿಗೊಪ್ಪಿಸಿ ಕಳೆದೆ ಹರಿಹರಿ
ಕ್ರೂರಸರ್ಪನ ಬಾಯ್ಗೆ ತುತ್ತಾದೆನೆ ಜಗನ್ನಾಥ
ಆರಿಗೊರಲುವೆನಿನ್ನು ಪ್ರಾಣವ
ನಾರು ಕಾವವರಕಟ ಬಿಡಿಸೈ
ವಾರಿಜಾಕ್ಷ ಮುಕುಂದ ಸಲಹೆಂದೊರಲಿದಳು ತರಳೆ ।೨೮।

ಶೈಲಶಿಖರದೊಳಿರ್ದು ಕೇಳಿದ
ಬಾಲಕಿಯ ಶೋಕವನು ಬಿಲ್ಲಿನ
ಕೋಲುಗಾರನು ಕರದ ಖಡ್ಗದ ಶಬರನೈತಂದು
ಆ ಲತಾಂಗಿಯ ಪಿಡಿದು ನುಂಗುವ
ಕಾಲಭುಜಗನ ಕಂಡು ನಿಜ ಕರ
ವಾಳದಲಿ ಖಂಡಿಸಿದನಹಿಯನು ಬಿಡಿಸಿದನು ಸತಿಯ ।೨೯।

ಹಾಯೆನುತ ಸುರರುಲಿಯೆ ಹಾವಿನ
ಬಾಯೊಳಗೆ ಸಿಲುಕಿರ್ದ ಕಮಲದ
ಳಾಯತಾಕ್ಷಿಯ ಬಿಡಿಸಿದನು ಸಂತೈಸಿದನು ಸತಿಯ
ರಾಯ ಕೇಳೈ ರಾಹುವಿನ ಕಟ
ವಾಯ ಚಂದ್ರನ ಸೆಳೆವವೋಲರಿ
ದಾಯಿತಬಲೆಗೆ ಮೂರ್ಛೆ ತಿಳಿದುದು ಶಬರಮಂತ್ರದಲಿ ।೩೦।

ಬಂದು ಕೆಂದಾವರೆಯ ಕೊಳದಲಿ
ಮಿಂದು ನಿಂದಿರೆ ಶಬರನೆಂದನು
ಇಂದುಮುಖಿ ನೀನೆನಗೆ ಸತಿಯಾಗೆನಲು ಖತಿಗೊಂಡು
ಇಂದೆನಗೆ ಅಸುವಿತ್ತು ಸಲಹಿದ
ತಂದೆಯಲ್ಲವೆ ನೀನು ಕೇಳು ಪು
ಳಿಂದ ಮುಳಿದರೆ ಶಪಿಸುವೆನು ಹೋಗೆಂದಳಿಂದುಮುಖಿ ।೩೧।

ತರುಣಿ ಕೋಪಿಸಿ ನುಡಿಯೆ ಭಯದಲಿ
ಶಿರವ ಬಾಗಿ ಪುಳಿಂದನತ್ತಲು
ಮರಳಿದನು ದಮಯಂತಿ ಮನದಲಿ ಪತಿಗೆ ಹಂಬಲಿಸಿ
ಮರಳುವಳು ಬನದೊಳಗೆ ಭೂಪನ
ನರಸಿ ಕಾಣದೆ ಬಯಲನಪ್ಪುವ
ಝರವಣಿಪ ಕಣ್ಣೀರಿನಲಿ ನಡೆತಂದಳಿಂದುಮುಖಿ ।೩೨।

ಅರಸ ಕೇಳಾಶ್ಚರ್ಯವನು ಸತಿ
ಬರುತಿರಲು ಕಾನನದಿ ನೆರೆದಿಹ
ಮರುಳು ಬಳಗವು ಭೂತಭೇತಾಳಗಳು ತೊಲಗಿದುವು
ಶರಭ ಮೊಲ ಕಾಡಾನೆ ಸಿಂಹಗ
ಳಿರದೆ ಜಾರಿದುವಲ್ಲಿ ಸತಿಯಳ
ಪರಮಪಾತಿವ್ರತ್ಯ ಮಹಿಮೆಗೆ ನೃಪತಿ ಕೇಳೆಂದ ।೩೩।

ಮುಂದೆ ಕಂಡಳು ಹೊಳೆವ ತಾಪಸ
ವೃಂದವನು ಕಣ್ಣೀರ ಸುರಿಸುತ
ಬಂದವಳನುರೆ ಕೇಳಿದರು ಮುನಿವರರು ಕರುಣದಲಿ
ಇಂದುಮುಖಿ ನೀನಾರು ಇಲ್ಲಿಗೆ
ಬಂದ ಹದನೇನೆನಲು ಶೋಕದಿ
ನೊಂದು ನುಡಿದಳು ಮುನಿಗಳಿಗೆ ಕೈಮುಗಿದು ವಿನಯದಲಿ ।೩೪।

ಏನನೆಂಬೆನು ತನ್ನ ಪುಣ್ಯದ
ಹಾನಿಯನು ಚಿತ್ತವಿಸಿ ಕರುಣದಿ
ಮಾನನಿಧಿಗಳು ಬಲ್ಲಿರೇ ನಳಚಕ್ರವರ್ತಿಯನು
ಆ ನರೇಂದ್ರನ ಮಡದಿ ತಾ ಮು
ನ್ನೇನ ನೋಂತೆನೊ ಪತಿಯಗಲಿ ಘನ
ಕಾನನಕೆ ಗುರಿಯಾದೆನೆಂದಳು ತರುಣಿ ಬಿಸುಸುಯ್ದು ।೩೫।

ಭೂತಳವ ನಳನೃಪತಿ ದ್ಯೂತದಿ
ಸೋತು ಪುಷ್ಕರಗಿತ್ತು ಸತ್ಯದ
ನೀತಿ ತಪ್ಪದೆ ಬಂದು ಬನದಲಿ ತನ್ನನಗಲಿದನು
ಧಾತುಗುಂದಿದೆ ಪತಿಯ ಕಾಣದೆ
ಭೀತಿಯಲಿ ನಿಮ್ಮಡಿಯ ಕಂಡೆನು
ಭೂತದಯೆ ನಿಮಗುಂಟಲಾ ಸಲಹೆಂದಳಿಂದುಮುಖಿ ।೩೬।

ನನೆದುದಂತಃಕರಣ ಕೇಳುತ
ಮುನಿಗಳೆಂದರು ತಾಯೆ ಶೋಕದಿ
ಕನಲಿ ಕಂಗೆಡಬೇಡ ನಿಜಪತಿ ರಾಜ್ಯಸಿರಿಸುತರು
ನಿನಗೆ ಬಂದಪರಿನ್ನು ಯೋಗದ
ಮನದಲರಿದೆವು ನಾವು ಅಂಜದಿ
ರೆನುತ ಪೇಳಿಯದೃಶ್ಯವದರು ಮುನಿಗಳೊಗ್ಗಿನಲಿ ।೩೭।

ಆ ತರುಣಿ ಬೆರಗಾಗಿ ಕನಸಿನ
ರೀತಿಯಾಯ್ತಕಟಕಟ ಮೌನಿ
ವ್ರಾತವೆತ್ತಲು ಸರಿದುದೋ ವಿಸ್ಮಯವಲಾಯೆನುತ
ಆ ತಳೋದರಿ ಪತಿಯ ಕಾಣದೆ
ಕಾತುರದಿ ಬರುತಿರಲು ಕಂಡರು
ನೂತನದ ಬೇಹಾರಿಗಳು ತೊಳಲುವ ನಿತಂಬಿನಿಯ ।೩೮।

ಆರಿವಳು ವನಲಕ್ಷ್ಮಿಯೋ ಸುರ
ನಾರಿಯೋ ಮಾರಾಂಗನೆಯೊ ಮದ
ನಾರಿ ಸತಿಯೋ ಸರಸತಿಯೊ ಮೇಣು ಸುರಮಾನಿನಿಯೊ
ಆರ ವನಿತೆಯೊ ಮಾಯರೂಪಿನ
ಭೂರಿಭೂತವೊ ತಿಳಿಯಲರಿದಿವ
ಳಾರೆನುತ ಭಯಗೊಂಡು ಓಡಿದರಲ್ಲಿ ಬಣಜಿಗರು ।೩೯।

ನೋಡಿದಳು ದಮಯಂತಿ ಭೀತಿಯ
ಲೋಡುತಿಹ ಬೀಡಿಕೆಯ ವೈಶ್ಯರ
ಹೇಡಿತನವನು ಕಂಡು ನಸುನಗುತಲ್ಲಿಗೈತಂದು
ಓಡಲೇತಕೆ ನಿಮಗೆ ಉಪಹತಿ
ಮಾಡುವಲು ತಾನಲ್ಲ ಜಗಕತಿ
ರೂಢಿಸಿದ ನಳನೃಪನ ಸತಿ ತಾನೆಂದಳಿಂದುಮುಖಿ ।೪೦।

ವೀರಸೇನನ ತನಯ ನಳನೃಪ
ಧಾರಿಣಿಯನುರೆ ಸೋತು ಕಾರ್ಯದ
ಕಾರಣದಿ ನಡೆತಂದನಡವಿಗೆ ತನ್ನನಗಲಿದನು
ದಾರಿದಪ್ಪಿದೆನಿಲ್ಲಿ ನಿಮ್ಮನು
ಸೇರಿದೆನು ಪರದೇಶಿ ತನಗೊಂ
ದೂರ ತೋರಿರೆ ನೀವೆನುತ ತುಂಬಿದಳು ಕಂಬನಿಯ ।೪೧।

ತಾಯೆ ನಿಮ್ಮ ಪದಾಬ್ಜದರ್ಶನ
ವಾಯಿತೆಮಗಿಂದಿನಲಿ ಧನ್ಯರು
ಈಯವಸ್ಥೆಗೆ ತಂದುದೇ ವಿಧಿ ನಿಮ್ಮನೆನುತೆರಗಿ
ನೋಯದಿರಿ ಇದೆ ಚೈದ್ಯಪುರವೆಂ
ದಾ ಯುವತಿಯೊಡಗೊಂಡು ಬರುತಿರೆ
ತೋಯಜಾಪ್ತನು ಪಶ್ಚಿಮಾಂಬುಧಿಗಿಳಿದನೊಲವಿನಲಿ ।೪೨।

ಹಗಲು ಸವೆದುದು ಹೊಂಬಿಸಿಲು ನೆರೆ
ದೆಗೆದುದತಿವೇಗದಲಿ ಕತ್ತಲೆ
ಬಿಗಿದುದವನೀತಳವ ಪೆಟ್ಟಿಗೆ ಮುಚ್ಚಿದಂದದಲಿ
ಸುಗುಣೆ ದಮಯಂತಿಗಳ ನೋಡಲು
ಸೊಗಸಿ ಬಂದನಿಮಿಷರವೋಲ್ ತಾ
ರೆಗಳು ಮೂಡಿದುವಂಬರದಿ ಪ್ರಜ್ವಲಿಪ ಕಾಂತಿಯಲಿ ।೪೩।

ಅವನಿಪತಿ ಕೇಳ್ ವೈಶ್ಯಕುಲಸಂ
ಭವರು ಹಾಯ್ಕಿದರಲ್ಲಿ ಗೂಡಾ
ರವನು ಬಿಟ್ಟರು ಪಾಳೆಯವ ಮಲಗಿದರು ರಾತ್ರಿಯಲಿ
ಅವಧಿ ಬಂಧುದನೇನನೆಂಬೆನು
ಕವಿದು ಕಾಡಾನೆಗಳು ಮಡುವಿಗೆ
ತವಕದಿಂ ನೀರಡಿಸಿ ಬಂದುದು ಗಿರಿಗಳಂದದಲಿ ।೪೪।

ಮುರಿದು ತರುಗಳನಿಡುತ ಮೆಳೆಗಳ
ನೊರಸಿ ಮುಟ್ಟುತ ಕೋಡಿನಲಿ ಬಲು
ಮೊರಡಿಗಳ ಕಿತ್ತಿಡುತ ಸೊಂಡಿಲ ತೂಗಿ ಮದವೇರಿ
ಕರಿಗಳೈತರೆ ಕಂಡು ಭೀತಿಯೊ
ಳಿರದೆ ಹಾಯ್ದರು ಕೆಲವು ಧೈರ್ಯದೊ
ಳುರುಬಿ ನಿಂದರು ಸಬಳದಲಿ ಹೊಕ್ಕಿರಿದು ಕಾದಿದರು ।೪೫।

ತೂಳಿದುವು ಮದಕರಿಗಳವರನು
ಸೀಳಿ ಹಾಯ್ದುವು ಕೆಲರ ಮುಮ್ಮೊನೆ
ಯಾಳು ಕವಿದುದು ಹೊಕ್ಕು ಕಾದಿದರತುಳ ಭುಜಬಲರು
ತಾಳಬಲ್ಲರೆ ಕೆಲರು ಕರಿಗಳ
ದಾಳಿಗಿದಿರೇ ಮುರಿದು ಹಾಯ್ದರು
ಹೇಳಲೇನದನರಸ ತೆಗೆದೋಡಿದರು ದೆಸೆದೆಸೆಗೆ ।೪೬।

ತರಹರಿಸಿ ನಿಲಲರಿದು ಕರಿಗಳ
ಉರುಬು ಘನವಿಟ್ಟಣಿಸಿ ಕೊಲುತಿದೆ
ಹರಣವನು ಹೋಗಾಡಲೇಕೆಂದುಳಿದ ಪಟುಭಟರು
ತೆರಳಿತಲ್ಲಿಯದಲ್ಲಿ ವಾಣಿ
ಜ್ಯರು ಮುರಿದು ಬರೆ ಕಾಣುತಾ ವೈ
ಶ್ಯರಗಧಿಪ ಚಿಂತಿಸಿದ ಹದನೇನೆಂದು ಮನದೊಳಗೆ ।೪೭।

ಅಮ್ಮ ಕೇಳೀ ಮದಗಂಜಗಳು
ನಮ್ಮ ಕೊಲುತಿವೆ ಹದನ ಕಾಣೆನು
ನಮ್ಮನೇ ನೆರೆ ನಂಬಿ ಬಂದಿರಿ ಇದಕೆ ಗತಿಯೇನು
ನಿಮ್ಮನಿಲ್ಲಿಗೆ ತಂದುದೇ ವಿಧಿ
ಬೊಮ್ಮಬರೆಹವ ಮೀರುವವರಾ
ರಮ್ಮ ಲೋಕದೊಳೆಂದು ಮರುಗಿದ ವೈಶ್ಯಕುಲತಿಲಕ ।೪೮।

ಜನನವೇ ವರಭೀಮರಾಯನ
ಮನೆಯೊಳಗೆ ನಳಚಕ್ರವರ್ತಿಯೆ
ಇನಿಯನಗ್ಗದ ವಿರಸೇನನೆ ಮಾವನಾಗಿರಲು
ವನದೊಳಿಭಕರಿಗಳಿಗೆ ತಾ ನಿಜ
ತನುವ ತೆರಬೇಕೆಂಬ ಕಾರಣ
ತನಗಿರಲು ನೀವೇನ ಮಾಡುವಿರೆಂದಳಿಂದುಮುಖಿ ।೪೯।

ಎನುತ ಕಣ್ಣೆವೆ ಬಿಗಿದು ಮನದಲಿ
ನೆನೆದಳಚ್ಯುತನಂಘ್ರಿಕಮಲವ
ವನಜನಾಭ ಮುಕುಂದ ಸಲಹೆನೆ ಕರಿಗಳಾಕ್ಷಣಕೆ
ವನಕೆ ಮರಳಿದುವವರನೆಲ್ಲರ
ವನಿತೆ ಸಂತೈಸಿದಳು ದೈವವ
ನೆನೆದ ಭಕ್ತರಿಗುಂಟೆ ಭಯವೆಲೆ ನೃಪತಿ ಕೇಳೆಂದ ।೫೦।

ಕಳೆದರಂದಿನ ರಾತ್ರಿಯನು ರವಿ
ಬೆಳಗಿದನು ಪೂರ್ವಾದ್ರಿಯಲಿ ಸಂ
ದಣಿಸಿ ನಡೆದರು ಮುಂದೆ ಕಂಡರು ಚೇದಿಪಟ್ಟಣವ
ಹೊಳೆವ ಹೇಮದ ಸೌಧಗಳ ತಳ
ತಳಿಪ ನೆರೆಯುಪ್ಪರಿಗೆಗಳ ಕಂ
ಡೊಲಿದು ಮನ ಹರುಷದಲಿ ಹೊಕ್ಕರು ಸತಿಸಹಿತ ಪುರವ ।೫೧।

ರಸದ ಲೇಪದ ಮಿಸುನಿಯೊ ಮಲಿನ
ವಸನದಲಿ ಹುದುಗಿರ್ದ ರತ್ನವೊ
ನಸಿದ ಮೇಘದೊಳೆಸೆವ ಚಂದ್ರನ ಬಿಂಬದಂದದಲಿ
ಶಶಿವದನೆ ಬರುತಿರಲು ಪುರಜನ
ವೊಸೆದು ನೋಡಿದುದಲ್ಲಿಗಲ್ಲಿಗೆ
ಬಿಸಜಮುಖಿಯವಳಾರೆನುತ ಬೆರಗಾಯ್ತು ಜನನಿಕರ ।೫೨।

ನುಡಿಗೆ ಶುಕಪಿಕ ನಲಿಯೆ ಮಿಗೆ ಸೆಳೆ
ನಡು ಬಳುಕೆ ವೃತ್ತಸ್ತನಕೆ ಸೋ
ರ್ಮುಡಿಯ ಭಾರಕೆ ಕೊರಳು ಕೊಂಕಲು ಮೆಲ್ಲಡಿಯನಿಡುತ
ಕುಡಿತೆಗಂಗಳ ನೋಟ ಕಾರ್ಮುಗಿ
ಲೊಡೆದು ಮಿಂಚುವ ಮಿಂಚಿನಂದದಿ
ಸಡಗರದಿ ಬರುತಿರ್ದಳಂಗನೆ ಹೊಳಲ ಬೀದಿಯಲಿ ।೫೩।

ಹೇಮದುಪ್ಪರಿಗೆಯಲಿ ನೃಪಸತಿ
ಕಾಮಿನಿಯರೋಲಗದೊಳೊಪ್ಪುತ
ತಾಮರಸದಳನಯನೆ ದಮಯಂತಿಯನು ತಾವ್ ಕಂಡು
ಈ ಮಹಾಸತಿ ಯಾವಳೋ ಸು
ತ್ರಾಮನರಸಿಯೊ ಎನುತ ಕರೆಸಿದ
ಡಾ ಮಹಿಳೆ ಬಂದಳು ನೃಪಾಲನ ಸತಿಯ ಸಮ್ಮುಖಕೆ ।೫೪।

ತಾಯೆ ನೀನಾರಾವ ದೇಶದ
ರಾಯನರಸಿಯಿದೇನು ನಿನಗೀ
ಪ್ರಾಯದಲಿ ಕಳೆಗುಂದಿ ಮಾಸಿಹುದೇನು ಪೇಳೆನಲು
ಆ ಯುವತಿ ಕಣ್ಣೀರಿನಲಿ ಪೂ
ರಾಯ ಶೋಕದಲೆಂದಳಾ ತರ
ಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ದು ।೫೫।

ಕ್ಷಿತಿಯನೆಲ್ಲವ ಸೋತು ಜೂಜಲಿ
ಪತಿ ಬನಕೆ ಬಂದೆನ್ನನಗಲಿದ
ಮತಿವಿಕಳತನದಿಂದ ತಿರುಗುತ ಬಂದೆ ನಿಮ್ಮಡಿಗೆ
ಹಿತವರಾರನು ಕಾಣೆ ನೀವೇ
ಗತಿಯೆನಗೆ ಪರದೇಶಿಯನು ಪರ
ಹಿತವೆ ಪುಣ್ಯವು ರಕ್ಷಿಸೆಂದಳು ನಳನೃಪನ ರಾಣಿ ।೫೬।

ನುಡಿಯ ಕೇಳುತ ಚೈದ್ಯಭೂಪನ
ಮಡದಿ ನೂಪುರ ಘಲಿರುಘಲಿರೆನ
ಲಡಿಯಿಡುತ ಬಂದಪ್ಪಿ ಸೆರಗಿನೊಳೊರಸಿ ಕಂಬನಿಯ
ಬಿಡು ವ್ಯಥೆಯ ವರಭೂಷಣಂಗಳ
ತೊಡು ದುಕೂಲವನುಡು ಸುಮಾಲ್ಯವ
ಮುಡಿಗೆ ಸೇರಿಸು ತರುಣಿಯೆಂದಳು ಚೈದ್ಯನೃಪನರಸಿ ।೫೭।

ದೇವಿ ನಿಮ್ಮುಪಚಾರವೇ ಸಂ
ಭಾವನೆಯಲಾ ನಮಗೆ ಬೇರಿ
ನ್ನಾವ ಭೂಷಣವೇಕೆ ದೇಸಿಗರಾವು ನಿಮ್ಮಡಿಯ
ಸೇವೆಯಲಿ ತಾನಿಹೆನು ಹೀನವ
ನಾವು ಬಳಸುವರಲ್ಲ ತನ್ನನು
ಕಾವ ಹದನನು ನೀವೆ ಬಲ್ಲಿರಿಯೆಂದಳಾ ಸತಿಗೆ ।೫೮।

ಎನಲು ನಸುನಗುತೆಂದಳಾ ಮಾ
ನಿನಿಗೆ ತಮ್ಮಿಂದಾಗದುಪಹತಿ
ನಿನಗೆ ಪೇಳೆವು ಹೀನ ಕೆಲಸವ ಚಿಂತೆ ಬೇಡಿನ್ನು
ತನಗೆ ಮಗಳು ಸುನೀತಿಯಾಕೆಯ
ಮನೆಯೊಳಿರು ಸೈರಂಧ್ರಿತನದಿಂ
ದನವರತ ನೀನೆಂದು ನೇಮಿಸಿ ಕಳುಹಿದಳು ಮನೆಗೆ ।೫೯।

ಚೇದಿಭೂಪನ ಮಡದಿ ತನ್ನ ಸ
ಹೋದರಿಯ ಸುತೆಯೆಂದು ಬಲ್ಲಳೆ
ಮೇದಿನಿಯೊಳಿವಳಾರ ಸತಿಯೆಂದರಿಯದಾಕೆಯನು
ಆದರಿಸಿ ಸಲಹಿದಳು ಮಗಳೋ
ಪಾದಿಯಲಿ ದಮಯಂತಿಯನು ಮನ
ಭೇದವಿಲ್ಲದೆ ಕರುಣದಿಂದಂಗನೆಯ ನೃಪನರಸಿ ।೬೦।

ಮನದ ದಗೆಯಡಗಿತು ಸುನೀತಿಯ
ಮನೆಯೊಳಿದ್ದಳು ಭೇದವಿಲ್ಲದೆ
ಅನುದಿನದೊಳಾಹಾರ ನಿದ್ರಾಂಗನೆಯ ತಾನುಳಿದು
ವನಜನಾಭನ ಕರುಣದಲಿ ಬಂ
ದಿನಿಯನೆಂದಿಗೆ ಮುಖವ ತೋರುವ
ನೆನುತ ಚಿಂತಿಸುತಿರ್ದಳಾ ವರಪುರದ ಚೆನ್ನಿಗನ ।೬೧।

* * * *

# ಆರನೆಯ ಸಂಧಿ

ಇಂದುವದನೆಯನಗಲಿ ತಾ ಮನ
ನೊಂದು ಕಾರ್ಕೋಟಕನ ದೆಸೆಯಲಿ
ಬಂದು ಹೊಕ್ಕನು ನಿಷಧಪತಿ ಋತುಪರ್ಣನಗರಿಯನು ॥

ಕೇಳು ಕುಂತೀತನಯ ನಿಷಧನೃ
ಪಾಲನಿತ್ತಲು ಮರೆದು ಮಲಗಿದ
ಬಾಲಕಿಯ ಬಿಟ್ಟಡವಿಯಲಿ ಹೊರವಂಟನಾ ವನವ
ಕಾಲವಾವನ ಕೀಳು ಮಾಡದು
ಶೂಲಪಾಣಿಯೆ ಬಲ್ಲ ನಳ ಭೂ
ಪಾಲಕನ ವಿಧಿಯೇನನೆಂಬೆನು ಬಂದನಡವಿಯಲಿ ।೧।

ವನಿತೆ ಮಲಗಿಹಳೋ ಅಧೈರ್ಯದಿ
ನೆನೆವಳೋ ದೈವವನು ನಿದ್ರೆಯ
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ
ಕನಲಿ ವಿಧಿಯನು ಬೈವಳೋ ಕಂ
ಬನಿಯ ಸುರಿವಳೊ ಶೋಕದಲಿ ನಿಜ
ತನುವ ಬಿಡುವಳೊ ಕಾಂತೆಯೆಂತಿಹಳೆನುತ ನಡೆತಂದ ।೨।

ಸುತರ ಪರರೆಡೆಗಿತ್ತು ನಂಬಿದ
ಸತಿಯ ತಂದಡವಿಯಲಿ ಮಲಗಿಸಿ
ಮತಿವಿಕಳನಾದೆನು ಪುರಾಕೃತ ಕರ್ಮಫಲವೈಸೆ
ಕ್ಷಿತಿಯೊಳಾರುಂಟೆನ್ನವೊಲ್ ನಿಜ
ಸತಿಗೆ ತಪ್ಪಿದ ಬಾಹಿರನು ಎಂ
ದತಿಶಯದ ಶೋಕದಲಿ ನಡೆದನು ಶಿವಶಿವಾಯೆನುತ ।೩।

ಲೋಕದೊಳಗಗ್ಗಳೆಯ ಮಹಿಪರ
ನೇಕರವಳೊಳಗಾರನೊಲ್ಲದೆ
ನೂಕಿ ತನ್ನನೆ ಒಲಿದು ಕೈಕೊಂಡಳು ಸರೋಜಮುಖಿ
ಆಕೆಯಗಲಿದ ಪಾತಕನು ತಾ
ನೇಕೆ ಧರೆಯೊಳು ಶಿವಶಿವಾಯೆಂ
ದಾ ಕಮಲಲೋಚನೆಗೆ ಮರುಗಿದನರಸ ಕೇಳೆಂದ ।೪।

ಈ ಪರಿಯೊಳತಿ ಶೋಕದಿಂದ ಪ್ರ
ಳಾಪಿಸುವ ನಳನೃಪತಿ ಹೆಚ್ಚಿದ
ತಾಪದಲಿ ಕಡುನೊಂದು ಬಳಲುತ ತನ್ನ ಮನದೊಳಗೆ
ಶ್ರೀಪತಿಯ ನೆಲೆಗೊಳಿಸಿ ಹೃದಯದ
ತಾಪದೊಳು ಬರುತಿರಲು ಮುಂದೆ ಸ
ಮೀಪದಲಿ ಹುತವಹನ ಮಹಿಮೆಯ ಕಂಡನವನೀಶ ।೫।

ಏನನೆಂಬೆನು ನೃಪತಿ ಕಿಚ್ಚಿನ
ಹಾನಿಯನು ಬನದೊಳಗೆ ಚಲಿಸುತ
ಭಾನುಮಂಡಲವಡರೆ ಮುಸುಕಿದ ಹೊಗೆಯ ಹೊರಳಿಯಲಿ
ಕಾನನವನೆಡೆಗೊಂಡ ದಳ್ಳುರಿ
ಗಾನಲಾಪುದೆ ತರುನಿಕರ ವೈ
ಮಾನಿಕರು ನಡನಡುಗೆ ಬೆಂದುದು ಸಕಲ ವನಭೂಮಿ ।೬।

ಬಿದಿರ ಮೆಳೆ ಧಗಧಗಿಸೆ ಘನ ಹೆ
ಬ್ಬಿದಿರು ಛಟಛಟಿರೆನಲು ಉರಿಯೊಳು
ಕದಳಿಗಳು ಸಿಮಿಸಿಮಿಸೆ ತರುಗಳನುರುಹಿ ಮೆಳೆಗಳನು
ಗದಗದಿಸೆ ಗುಹೆಗಳಲಿ ಮೃಗತತಿ
ಬೆದರಿ ಹಾಯ್ದುವು ಪಕ್ಷಿಸಂಕುಲ
ಉದುರಿದುವು ಗರಿಸಹಿತ ಬೆಂದಾ ವನದ ಮಧ್ಯದಲಿ ।೭।

ತೆಗೆದು ಹಾಯ್ದುವು ಸಿಂಹ ಶಾರ್ದೂ
ಲಗಳು ಕರಿಗಳ ಹಿಂಡು ನಾನಾ
ಮೃಗಗಳಗಣಿತ ಬೆಂದು ಬಿದ್ದವು ನಿಮಿಷಮಾತ್ರದಲಿ
ಚಿಗಿದು ಹಾಯ್ದುವು ಗಂಡಭೇರುಂ
ಡಗಳು ಮೊದಲಾದಖಿಳಮೃಗಪ
ಕ್ಷಿಗಳು ಕೆಡೆದುವು ಕಿಚ್ಚಿನೊಳಗವನೀಶ ಕೇಳೆಂದ ।೮।

ಪ್ರಳಯಕಾಲದಿ ಸುಡುವ ವಡಬಾ
ನಳನೊ ಎನಲಾ ವನವ ಸುಡುತಲಿ
ಸುಳಿಸುಳಿಯುತಾಹಾರಗೊಳುತಿರಲಲ್ಲಿ ದನಿಯಾಯ್ತು
ಸಿಲುಕಿದೆನು ಪಾವಕನೊಳಕಟಕಟ
ಅಳಿವೆ ಹಾ ನೃಪಕುಲಶಿರೋಮಣಿ
ಒಲಿದು ಬಿಡಿಸೈ ಸುಕೃತ ನಿನಗಹುದೆಂದುದಾ ನಿನದ ।೯।

ಆಗಲಾ ದನಿಗೇಳಿ ನೃಪತಿ ಸ
ರಾಗದಿಂದವೆ ಬಂದು ಹೊಕ್ಕನು
ಕೂಗಿದವರಾರೆನುತ ಬರುತಿರೆ ಕಂಡನುರಗಪತಿ
ಪೋಗುತಿದೆಯೆನ್ನಸುವು ಸಲಹು ಷ
ಡಾಗಮಜ್ಞ ನೃಪಾಲಯೆನಲಾ
ಭೋಗಿಯನು ಕಂಡರಸ ನೀನಾರೆಂದು ಬೆಸಗೊಂಡ ।೧೦।

ಉರಗಪತಿ ಕಾರ್ಕೋಟಕನು ತಾ
ನರಸ ಕೇಳೀ ಬನದೊಳಿರುತಿರೆ
ಪರಮ ಋಷಿ ಬಂದೆನ್ನ ತಾಗಿದನಂದು ಭೀತಿಯಲಿ
ಕರೆದುಕೊಟ್ಟನು ಶಾಪವನು ಸಂ
ಚರಿಸದಂತಿರೆಯೆನಗೆಯಿದು ಪರಿ
ಹರಿಸಲೆಂದಿಗೆ ಮುನಿಪ ಕರುಣಿಪುದೆಂದೊಡಿಂತೆಂದ ।೧೧।

ಇರಲಿರಲು ಕಾಲಾಂತರಕೆ ಭೂ
ವರನು ನಳನೃಪನಿಲ್ಲಿಗೈದುವ
ಧರಣಿಪನ ಕರಕಮಲ ಸೋಂಕಲು ಶಾಪವಿದು ಬಳಿಕ
ಪರಿಹರಿಪುದೆನೆ ಮುನಿಯ ವಚನದಿ
ಬರವ ಹಾರುತ್ತಿರಲು ಬಂದೆ
ಕರುಣದಿಂದಗ್ನಿಯನು ಪರಿಹರಿಸೆಂದನುರಗಪತಿ ।೧೨।

ಕರುಣದಲಿ ನೃಪ ಭೀತಿಗೊಳ್ಳದೆ
ಉರಗಪತಿಯನು ತೆಗೆಯುತನಲನ
ಉರಿಯ ತಪ್ಪಿಸಿ ಕೊಳದ ತೀರಕೆ ತಂದು ಪರಿಚರಿಸೆ
ಕರವಿಡಿದು ಧರಣಿಪನ ಕಚ್ಚಿದ
ಡುರವಣಿಸಿ ವಿಷವೇರೆ ನೃಪತಿಯ
ಪರಮತೇಜದ ದೇಹ ಕೆಟ್ಟಿತು ವಿಕೃತರೂಪಾಗಿ ।೧೩।

ದೊಡ್ಡ ಹೊಟ್ಟೆಯ ಗೂನು ಬೆನ್ನಿನ
ಅಡ್ಡ ಮೋರೆಯ ಗಂಟು ಮೂಗಿನ
ದೊಡ್ಡ ಕೈಕಾಲುಗಳ ಉದುರಿದ ರೋಮಮೀಸೆಗಳ
ಜಡ್ಡು ದೇಹದ ಗುಜ್ಜುಗೊರಲಿನ
ಗಿಡ್ಡ ರೂಪಿನ ಹರಕು ಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ।೧೪।

ಮಾರನಾಕಾರದ ನೃಪಾಲಕ
ಕ್ರೂರ ರೂಪಾದನು ಪುರಾಕೃತ
ಮೀರಲಾರಳವೆಂದು ನುಡಿದನು ತನ್ನ ಮನದೊಳಗೆ
ತೋರಮಾಣಿಕವೆಂದು ಪಿಡಿದರೆ
ಭೂರಿ ಕೆಂಡವಿದಾಯ್ತು ಶಿವಶಿವ
ಕ್ರೂರಜಂತುಗಳೊಡನೆ ಸಖತನ ಫಲಿಸಿತೆನಗೆಂದ ।೧೫।

ಮುನ್ನ ಮಾಡಿದ ಕರ್ಮಫಲವಿದು
ಬೆನ್ನ ಬಿಡದಿರಲುರಗಪತಿ ಕೇ
ಳಿನ್ನು ನೋಯಲದೇಕೆ ತಾನೇ ಪಾಪಿಯಾದೆನಲ
ಪನ್ನಗಾರಿಧ್ವಜನ ಕೃಪೆ ತನ
ಗಿನ್ನು ತಪ್ಪಿದ ಬಳಿಕ ಲೋಕದೊ
ಳಿನ್ನು ಸೈರಿಸಲಾರ ವಶವೆಂದೆನುತ ಮರುಗಿದನು ।೧೬।

ಏಕೆ ನೃಪತಿ ವೃಥಾ ಮನೋವ್ಯಥೆ
ಕಾಕಬಳಸಲು ಬೇಡ ನೀನವಿ
ವೇಕಿಯೇ ಸಾಕಿನ್ನು ನಿನಗುಪಕಾರವಂಜದಿರು
ಲೋಕ ನಿನ್ನನು ಕಾಣದಂತಿರ
ಬೇಕೆನುತಲೇರಿಸಿದೆ ಗರಳವ
ನೇಕ ಉಪಕಾರಂಗಳಹವದರಿಂದ ನಿನಗೆಂದ ।೧೭।

ಗರಳವಿದು ಸರ್ವಾಂಗದಲಿ ಸಂ
ಚರಿಸುತಿಹ ಪರಿಯಂತ ರಿಪುಗಳ
ಶರ ಜಲಾಗ್ನಿ ಭುಜಂಗ ರೋಗಾದಿಗಳ ಭಯವಿಲ್ಲ
ನಿರತವಿದು ವಜ್ರಾಂಗಿ ಬೇಡಿ
ನ್ನರಸ ಚಿಂತಿಸಬೇಡ ಕಾಯ್ದು
ಹೊರಗೆ ತಾನಿದು ಬೇರೆ ಭಯ ಬೇಡಿನ್ನು ನಿನಗೆಂದ ।೧೮।

ಜನಪ ಕೇಳೈ ಧರೆಗೆ ಋತುಪ
ರ್ಣನು ಮಹಾರಾಜೇಂದ್ರ ಗುಣನಿಧಿ
ಇನಕುಲಾಂಬುಧಿಚಂದ್ರನಾತನ ಪುರವಯೋಧ್ಯೆಯದು
ನಿನಗೆ ಬಹುದಕ್ಷ ಹೃದಯವು ಆ
ತನಲಿ ನೀನವಗಶ್ವಹೃದಯವ
ನನುಗೊಳಿಸು ಸಾಕಿನ್ನು ಚಿಂತಿಸಬೇಡ ಹೋಗೆಂದ ।೧೯।

ಪೊಡವಿಪನನೋಲೈಸು ವಾಘೆಯ
ಪಿಡಿದು ಬಾಹುಕನೆಂಬ ನಾಮದಿ
ನಡೆಸು ರಥವನು ಹೀನವೃತ್ತಿಯದಲ್ಲ ನಿನಗಿನ್ನು
ಬಿಡದೆ ಮುನ್ನಿನ ರೂಪು ಬೇಕಾ
ದಡೆ ನೆನೆವುದಾ ಪಕ್ಷಿಗಳ ಹ
ಚ್ಚಡವನೀವುವು ಧರಿಸಲಡಗುವುದೀ ಕುರೂಪಿತನ ।೨೦।

ನಿನ್ನ ಹವಣೇ ಪೂರ್ವದಲಿ ಭಿ
ಕ್ಷಾನ್ನವನು ಬೇಡಿದನು ಪಶುಪತಿ
ಪನ್ನಗಾರಿಧ್ವಜನು ಕಾಯ್ದನು ಪಶುಗಳಡವಿಯಲಿ
ಉನ್ನತೈಶ್ವರ್ಯಪ್ರದನು ಶತ
ಮನ್ಯು ಬನದಲಿ ನವೆಯನೇ ಸಾ
ಕಿನ್ನು ಮನನೋಯದಿರು ಚಿತ್ತೈಸೆಂದನುರಗಪತಿ ।೨೧।

ಪರಮಸತ್ಯವ್ರತದೊಳಾ ಪು
ಷ್ಕರನ ಗೆಲಿದುನ್ನತದ ರಾಜ್ಯದ
ಸಿರಿ ಮಿಗಲು ಸಾಮ್ರಾಜ್ಯವಾಳುವೆ ನಿನ್ನ ಸತಿಸಹಿತ
ವರವನಿತ್ತೆನು ನಿನಗೆ ಎಂದುಪ
ಚರಿಸಿ ಕಾರ್ಕೋಟಕನು ನಳನೃಪ
ಗರುಹುತಾಕ್ಷಣ ಮಾಯವಾದನು ರಾಯ ಕೇಳೆಂದ ।೨೨।

ಬಲಿದ ಚಿಂತೆಯ ಮನದ ದುಗುಡದ
ನಳನೃಪತಿ ಕಾನನದಿ ಬರುತಿರೆ
ಮಲೆತು ತೊಲಗದ ದುಷ್ಟಮೃಗಗಳ ಕಂಡು ನಸುನಗುತ
ಹಲವು ಗಿರಿಗುಹೆ ಗಹ್ವರಂಗಳ
ಕಳೆದು ಮುಂದಣ ಜನಪದಂಗಳ
ಬಳಿವಿಡಿದು ನಡೆತಂದನಲಸದೆ ಹಲವು ಯೋಜನವ ।೨೩।

ಹರಿವ ನದಿಗಳ ವನತಟಾಕದ
ವರಕುಸುಮ ಮಲ್ಲಿಗೆಯ ಬನಗಳ
ಪುರದ ಪ್ರಾಂತದೊಳೆಸೆವ ಕೆಂದಾವರೆಯ ಕೊಳಗಳನು
ಉರುತರದ ಪಾನೀಯ ಶಾಲೆಯ
ಮರಗಳಿಂದತಿ ಮೆರೆವ ರಾಜ್ಯವ
ಧರಣಿಪತಿ ಸಂತಸದಿ ನೋಡುತ ಬಂದನಾಯೆಡೆಗೆ ।೨೪।

ನಗನಗಿಪ ಕೋಟಾವಳಿಯ ಹೊಗ
ರುಗುವ ಹೇಮದ ಕೊತ್ತಳಂಗಳ
ಗಗನವನು ಚುಂಬಿಸುವ ತೆನೆಗಳ ಸಾಲುರತ್ನಗಳ
ಸೊಗಸುವಾಳ್ವೇರಿಗಳ ಸುತ್ತಿರಿ
ವಗಳ ಘಾತವನಾರು ಬಲ್ಲರು
ಬಿಗಿದ ವಜ್ರಕವಾಟವೆಸೆದುದು ದಿಕ್ಕುದಿಕ್ಕಿನಲಿ ।೨೫।

ಹೊಳೆವ ಮಿಸುನಿಯ ರತ್ನನಿಚಯದ
ನೆಲೆನೆಲೆಯ ಸೌಧಾಗ್ರದಲಿ ಪ್ರ
ಜ್ವಲಿಪ ಹೇಮದ ಕಲಶಗಳ ರವಿಚಂದ್ರಶಾಲೆಗಳ
ಲಲನೆಯರ ನಾನಾ ವಿನೋದದ
ಹಲವು ಗೋಪುರ ಶಿಖರದಗಣಿತ
ನೆಲೆಯ ವರ್ಣಿಸಲರಿದಯೋಧ್ಯಾಪುರವು ರಂಜಿಸಿತು ।೨೬।

ಅರಸುಗಳು ಭೂಸುರರು ಮಿಗೆ ವೈ
ಶ್ಯರು ಚತುರ್ಥರು ನಾಗರೀಕದ
ಪುರಜನರು ಸಂದಣಿಸಿತಗಣಿತ ರಾಜವೀಧಿಯಲಿ
ಕರಿ ತುರಗ ರಥ ಪಾಯದಳ ಗೋ
ಚರಿಸಿತಂಗಡಿ ನವವಿಧಾನದಿ
ಮೆರೆವಯೋಧ್ಯಾಪುರವ ಕಂಡನು ತೂಗಿದನು ಶಿವರ ।೨೭।

ಬಂದು ಹೊಕ್ಕನು ಪುರವ ಮೆರೆವತಿ
ಚಂದವನು ನೆರೆನೋಡಿ ಮನದೊಳ
ಗಂದು ಕೊಂಡಾಡಿದನು ಋತುಪರ್ಣನ ಮಹಾಸಿರಿಯ
ತಂದುದೇ ವಿಧಿ ತನ್ನನಿಲ್ಲಿಗೆ
ಮಂದಭಾಗ್ಯನು ತಾನೆನುತ ಮನ
ನೊಂದು ನೆನೆದನು ವರಪುರಾಧಿಪ ಚೆನ್ನಕೇಶವನ ।೨೮।

* * * *

# ಏಳನೆಯ ಸಂಧಿ

ಮಗಳ ಕಾಣದೆ ಭೀಮನೃಪ ಮೂ
ಜಗವ ಭೇದಿಸಿ ಚೈದ್ಯಭೂಪನ
ನಗರದಲ್ಲಿರೆ ಕಂಡು ಕರೆಸಿದ ತನ್ನ ನಿಜಸುತೆಯ ॥

ಕೇಳು ಧರ್ಮಜ ರತ್ನನಿರ್ಮಿತ
ದಾಲಯದ ಸೊಬಗಿನಲಿ ಓಲಗ
ಶಾಲೆಯಲಿ ಋತುಪರ್ಣನಿದ್ದನು ಸಿಂಹಪೀಠದಲಿ
ಸಾಲ ಮಕುಟದ ನೃಪರು ಭೂಸುರ
ಜಾಲ ಮಂತ್ರಿ ಪುರೋಹಿತರು ಗುಣ
ಶೀಲರುನ್ನತ ಸತಿಯರಿಂದೆಸೆದಿರ್ದುದಾಸ್ಥಾನ ।೧।

ಇದು ಸಮಯ ತನಗೆಂದು ನಳನೃಪ
ಮುದದಿ ವೇಷವ ತಾಳ್ದು ಹರಿಯಂ
ದದಲಿ ಬಂದನು ಸಭೆಯ ಕಂಡನು ನೃಪಗೆ ಕೈಮುಗಿದು
ಸದಮಲಾಸ್ಥಾನದಲಿ ರಿಪುಭಟ
ಕದನಕಲಿಗಳು ಜೀಯೆನಲು ನಯ
ಹೃದಯದಲಿ ಬಿನ್ನೈಸಿದನು ಋತುಪರ್ಣಭೂಪತಿಗೆ ।೨।

ಅವನಿಪತಿ ಕೇಳ್ ನಿಮ್ಮ ಪದಕಮ
ಲವನು ಭಜಿಸುವೆ ಜೀಯ ಚಿತ್ತದಿ
ಸವಡಿನುಡಿ ತನಗಿಲ್ಲ ಬಾಹುಕನೆಂಬುದಭಿಧಾನ
ಭುವನದೊಳು ತಾನಶ್ವಕುಲಹೃದ
ಯವನು ಬಲ್ಲೆನು ಶಾಕಪಾಕದಿ
ಸವಿಗೊಳಿಪ ವರವಿದ್ಯೆ ತನಗುಂಟೆಂದನವ ನಗುತ ।೩।

ಸೂಪಕಾರದೊಳಗ್ಗಳನು ಕಡು
ರೂಪಿನವ ತಾನಲ್ಲ ಚಿತ್ತದಿ
ಕಾಪುರುಷನೆನ್ನದಿರು ನೋಡಾ ತನ್ನ ಪೌರುಷವ
ಭೂಪ ಮುಂಗೈಗಂಕಣಕೆ ಕುಲ
ದೀಪ ಕನ್ನಡಿಯೇಕೆ ತರಿಸು ಪ್ರ
ತಾಪವಾಜಿಯನೆಂದು ಬಿನ್ನೈಸಿದನು ನಸುನಗುತ ।೪।

ಪೊಡವಿಪತಿ ಋತುಪರ್ಣ ಬಾಹುಕ
ನುಡಿದ ವಚನಕೆ ಮೆಚ್ಚಿ ಮನದು
ಗ್ಗಡದ ತೇಜಿಯ ತರಿಸಿ ಕೊಡಲೇರಿದನು ಬೀದಿಯಲಿ
ಮಡದ ಸನ್ನೆಗೆ ಕುಣಿದು ರವೆಗಾ
ಲಿಡುತ ಜೋಡಣೆಯಿಂದ ಹಯವಡಿ
ಗಡಿಗೆ ಚಿಮ್ಮಿತು ವಾಯುವೇಗದೊಳರಸ ಕೇಳೆಂದ ।೫।

ಕರದ ವಾಘೆಯ ಸಡಿಲ ಬಿಡೆ ನಿ
ಬ್ಬರದ ಗಮನದೊಳೈದಿತವನಿಯೊ
ಳುರವಣಿಸಿ ಕೆಂಧೂಳಿ ಮುಸುಕಿದುದಂಬರವ ಬಿಡದೆ
ಧರಣಿ ತಲ್ಲಣಿಸಿದುದು ಗಗನದಿ
ಸುರರು ಕೊಂಡಾಡಿದರು ರಾವುತ
ನರಸನಹುದೋ ಭಾಪು ಭಾಪೆಂದುದು ಸಮಸ್ತಜನ ।೬।

ಮುರುಹಿ ಹಿಡಿಯಲು ಮಡದ ಸನ್ನೆಗೆ
ತಿರುಗಿತತಿವೇಗದಲಿ ಹಯವೋ
ಸರಿಸಿ ಕಿರುಬೆಮರಿಡಲು ನಿಲಿಸುತ ವಾರುವವನಿಳಿದು
ಕರವ ಮುಗಿಯಲು ನೃಪತಿ ಮೆಚ್ಚುತ
ತರಿಸಿ ಕೊಟ್ಟನು ಭೂಷಣಂಗಳ
ಹಿರಿದು ಸಂಬಳವಿತ್ತು ನಿಲಿಸಿದನರಸ ಬಾಹುಕನ ।೭।

ಜನಪ ಕೇಳ್ ಬಾಹುಕನು ವಾಲಾ
ಖ್ಯನಲಿ ಸಖ್ಯವ ಬೆಳೆಸುತಾತನ
ನನುದಿನವು ಕೂಡಿರ್ದನೊಂದಾನೊಂದುದಿನ ರಾತ್ರಿ
ವನಜಮುಖಿ ದಮಯಂತಿಯೊಳು ಚುಂ
ಬನ ಸರಸ ಸಲ್ಲಾಪದಿಂದಿಹ
ಕನಸ ಕಂಡೆಚ್ಚರದಿ ಕಾಣದೆ ಸತಿಗೆ ಹಲುಬಿದನು ।೮।

ಹಾ ತರುಣಿ ನಳಿನಾಕ್ಷಿ ನಯಸು
ಪ್ರೀತಿಪೂರ್ವಕದಿಂದ ಕನಸಲಿ
ಮಾತುದೋರಿದೆ ಬಂದು ನನ್ನಲಿ ಕರುಣದಿಂ ನೀನು
ಧಾತುಗುಂದಿದೆನಕಟ ಅಸುರಾ
ರಾತಿ ಬಲ್ಲನೆನುತ್ತ ಮನದಲಿ
ಕಾತರಿಸಿ ನಿಜಸತಿಗೆ ಹಲುಬಿದ ಮದನನೆಸುಗೆಯಲಿ ।೯।

ವಿಕಳವನು ವಾಲಾಖ್ಯ ಕೇಳಿದು
ಪಕಪಕನೆ ನಗುತೆಂದನೆಲೆ ಬಾ
ಹುಕನೆ ಹಲುಬುವುದೇನು ಕಾಂತೆಗೆ ತಕ್ಕ ಬೊಂತೆಯನು
ಅಕಟ ನೀನತಿ ಚೆಲುವನೇ ಬಾ
ಲಕಿ ನಿನಗೆ ತಕ್ಕವಳೊ ಲೋಕದಿ
ಮಕರಕೇತನ ಮರುಳನೆಂದಪಹಾಸ್ಯ ಮಾಡಿದನು ।೧೦।

ಎಂದು ಹಾಸ್ಯವ ಮಾಡಿದವನೊಡ
ನೆಂದನಾ ಬಾಹುಕನು ಪೂರ್ವದೊ
ಳಂದು ಬ್ರಾಹ್ಮಣನೊಬ್ಬ ನಿಜಸತಿಯಗಲಿ ಎನ್ನೊಡನೆ
ನೊಂದು ನುಡಿದನು ವಿರಹದಲಿ ಅದ
ನಿಂದು ಕನಸಲಿ ಕಂಡು ಭ್ರಾಂತಿಯೊ
ಳೆಂದಡದು ತಪ್ಪೇನು ಸತಿಸುತರಿಲ್ಲ ತನಗೆಂದ ।೧೧।

ಅರಸ ಕೇಳಾ ಪುರದೊಳೊಬ್ಬರಿ
ಗರಿಯದಂದದಿ ನಳನಿರಲು ಭೂ
ಸುರರ ಮತದಲಿ ಕೇಳ್ದ ಭೀಮನೃಪಾಲನೀ ಹದನ
ಧರೆಯನೆಲ್ಲವ ಜೂಜಿನಲಿ ಪು
ಷ್ಕರಗೆ ಸೋತು ನಳನೃಪನಡವಿಗೆ
ತೆರಳಿದನು ಸತಿಸಹಿತವೆನೆ ಹೊರಳಿದನು ಶೋಕದಲಿ ।೧೨।

ಹಾ ಮಗಳೆ ದಮಯಂತಿ ನಿಷಧ ಸ
ನಾಮನನು ಕೈಹಿಡಿದು ಬಾಳುವ
ನೇಮವನು ಬಿಸುಟಡವಿಗಟ್ಟಿತೆ ವಿಧಿ ವಿಕರ್ಮಫಲ
ಭೀಮನೃಪನುದರದಲಿ ಜನಿಸಿ ವಿ
ರಾಮವಾದುದೆ ನಿನ್ನ ಸಿರಿಮುಖ
ತಾಮರಸವನು ಕಾಣೆ ತೋರೆಂದರಸ ಹಲುಬಿದನು ।೧೩।

ಮಗಳೆ ಮೋಹದ ಸುತರನಾರಿಗೆ
ತೆಗೆದು ಬಿಸುಟೆ ನಿರಾಶೆಯಲಿ ಈ
ಬಗೆಗೆ ತಂದುದೆ ವಿಧಿಯು ನಿನ್ನನು ಹರಮಹಾದೇವ
ಹೊಗಲುಬಹುದೇ ಕಾನನದೊಳಿಹ
ಮೃಗಗಳಿಂದೇನಾದಳೋ ಪತಿ
ಯಗಲಿದನೊ ಭೇತಾಳ ನುಂಗಿತೊ ಎನುತ ಹಲುಬಿದನು ।೧೪।

ಬಡವರುದರದೊಳುದಿಸಿ ಸುಖವನು
ಪಡೆಯಲೊಲ್ಲದೆ ಬಂದು ನೀನೀ
ಪೊಡವಿಪತಿಯುದರದಲಿ ಸಂಜನಿಸುವರೆ ಎಲೆ ತಾಯೆ
ಗಿಡಮೆಳೆಗಳಾರಣ್ಯದಲಿ ತನು
ವಿಡಿದು ಸೈರಿಪುದೆಂತು ಮಗಳೇ
ಸುಡು ತನುವನಿದನೆಂದು ಮರುಗಿದಳವಳ ನಿಜಜನನಿ ।೧೫।

ಸತಿಪತಿಗಳೀ ಪರಿಯ ಶೋಕೋ
ನ್ನತಿಯ ಸೈರಿಸಲಾರದಾ ಮಾ
ರುತನ ಸಖನೊಳು ಪುಗುವೆವೆಂದುರವಣಿಸಿ ನಡೆತರಲು
ಕ್ಷಿತಿಪ ಕೇಳಿಂತವರು ಬರುತಿರೆ
ಮತಿಯುತನೆ ಚಿಂತೆಯನು ಬಿಡು ಪತಿ
ವ್ರತೆಗೆ ಹಾನಿಯೆ ಸುಖದೊಳಿಹಳೆಂದುದು ನಭೋನಿನದ ।೧೬।

ಎಂದ ವಾಕ್ಯವ ಕೇಳಿ ಭೂಸುರ
ವೃಂದದಲಿ ಮುನಿಯೋರ್ವ ನುಡಿದನು
ಸಂದ ಪರಮಾನಂದ ಜ್ಯೋತಿರ್ಮಯನ ವಾಕ್ಯವಿದು
ಇಂದುಮುಖಿ ದಮಯಂತಿ ನಳನೃಪ
ರೆಂದಿಗೂ ಸುಕ್ಷೇಮಿಗಳು ನೀ
ವಿಂದು ಕಳುಹಿಸಿ ಚರರ ಭೇದಿಸಲೆಂದನಾ ಮುನಿಪ ।೧೭।

ಎನಲು ಮುನಿಪನ ಮಾತಿನಲಿ ಅರ
ಮನೆಗೆ ಬಂದು ವಿಶಾಲ ಚಿಂತೆಯ
ಮನದಲಿರೆ ಇನನಿಳಿದನಸ್ತಾಂಬುಧಿಗೆ ವಹಿಲದಲಿ
ಜನಪನಾ ರಾತ್ರಿಯಲಿ ನಿದ್ರಾಂ
ಗನೆಯನುಳಿಯಲು ಪೂರ್ವಶೈಲದಿ
ದಿನಪ ತಲೆದೋರಿದನು ಹರೆದುದು ರಜನಿಯಾಕ್ಷಣಕೆ ।೧೮।

ಅರಸ ಕರೆಸಿದನಾಪ್ತರನು ಭೂ
ಸುರರಿಗೆಂದನು ನೀವು ಕರುಣದಿ
ಧರೆಯೊಳೆಲ್ಲಿಹಳೆನ್ನ ಸುತೆ ದಮಯಂತಿ ನಳನೃಪರ
ಇರವ ಕಾಂಬುದು ಕಂಡು ಕರೆತಂ
ದರಿಗೆ ಕೊಡುವೆನು ಧರೆಯೊಳರ್ಧವ
ನಿರುತವೆಂದುಪಚರಿಸಿ ಕಳುಹಿದ ಭೀಮನೃಪನವರ ।೧೯।

ಹರಿದರರಸಾಳುಗಳು ಪಶ್ಚಿಮ
ಶರಧಿ ದಕ್ಷಿಣ ಶರಧಿ ಪೂರ್ವದ
ಶರಧಿಯುತ್ತರ ಕುರುನರೇಂದ್ರರ ಸೀಮೆ ಪರಿಯಂತ
ಪುರಗಳಲಿ ವನವೀಧಿಯಲಿ ತ
ದ್ಗಿರಿಗಳಲಿ ನಾನಾ ದಿಗಂತದೊ
ಳರಸಿ ಕಾಣದೆ ಮುಂದೆ ನಡೆದರು ಹಲವು ದಿವಸದಲಿ ।೨೦।

ಪುರನಗರ ಬೀದಿಗಳ ಮಧ್ಯದಿ
ನೆರೆದ ಸಭೆಯಲಿ ಮಾರ್ಗದಲಿ ಸಂ
ಚರಿಸುವವರನು ಕಂಡು ಕೇಳುತ ಬಂದರಲ್ಲಲ್ಲಿ
ಇರವ ಕಾಣದೆ ಬಳಲಿ ಚಿಂತಿಸಿ
ಮರುಗುತವನೀಸುರರು ಭೇದಿಸು
ತಿರಲು ಮೂವರು ಬೇರೆ ಹೊಕ್ಕರು ಚೈದ್ಯನಗರಿಯನು ।೨೧।

ಅಲ್ಲಿ ವಾರ್ತೆಯ ಕೇಳಿದರು ಭೂ
ವಲ್ಲಭನ ಕ್ರತುಸಮಯವೆಂದವ
ರೆಲ್ಲ ಗಮಿಸಲು ಕಂಡು ಮೂವರು ಕೂಡುತವರೊಡನೆ
ನಿಲ್ಲದೈದಿದರರಮನೆಗೆ ತಮ
ಗಲ್ಲಿ ದಕ್ಷಿಣೆ ತೃಪ್ತಿಭೋಜನ
ವೆಲ್ಲ ಸಿಗಬಹುದೆನುತ ಹೊಕ್ಕರು ಯಜ್ಞಮಂಟಪವ ।೨೨।

ಜನಪನವನೀಸುರರ ಮಂತ್ರದ
ಲನಿಲಸಖನಾರಾಧಿಸಲು ನೃಪ
ತನುಜೆಯಾದ ಸುನೀತೆಯೊಳು ದಮಯಂತಿ ಭಾವಿಸುತ
ವನಿತೆಯಿರೆ ಕಂಡನು ಸುದೇವನು
ಮನದೊಳನುಮಾನಿಸಿದನೀ ಮಾ
ನಿನಿ ಮಹಾಸತಿಯೆನುತ ವಿಸ್ಮಯಗೊಂಡ ಮನದೊಳಗೆ ।೨೩।

ಮುಗಿಲು ಮುಸುಕಿದ ಚಂದ್ರಬಿಂಬವೊ
ಪಗಲೊಳೆಸೆವ ಸುದೀಪಕಾಂತಿಯೊ
ಹೊಗೆಯೊಳೆಸಗಿದ ಚಿತ್ರಪ್ರತಿಮೆಯೊ ಹೇಳಲೇನವಳ
ಉಗಿದು ಬಿಸುಟ ವಿಭೂಷಣದ ಮೈ
ಲಿಗೆಯ ಸೀರೆಯ ಮಲಿನತನು ಕಳೆ
ದೆಗೆದು ಕೈಗಲ್ಲದಲಿ ನಿಂದಿರೆ ಕಂಡನಾ ಸತಿಯ ।೨೪।

ಇದು ಪತಿವ್ರತಧರ್ಮವಹುದೀ
ಸುದತಿ ತೊರೆದಿಹಳೆಲ್ಲವನು ನೃಪ
ವಧುವ ಕಾಣಿಸಿಕೊಂಬೆನೆಂದು ಸುದೇವ ನಡೆತಂದು
ಹದನಿದೇನೌ ತಾಯೆ ನಿಮ್ಮಯ
ವದನಕಮಲವು ಬಾಡಿ ಕಡುಮಾ
ಸಿದುಡಿಗೆಯಲಿಹುದೇನು ಕಾರಣವೆನುತಲಿಂತೆಂದ ।೨೫।

ಇಂದುವದನೆ ವಿದರ್ಭಪಟ್ಟಣ
ದಿಂದ ಬಂದೆನು ತಾನು ಭೂಸುರ
ವಂದ್ಯನೆನ್ನಭಿಧಾನ ಕೇಳು ಸುದೇವನೆಂಬುವುದು
ಇಂದು ನಿಮ್ಮನು ನೋಡ ಕಳುಹಿದ
ತಂದೆ ಭೀಮನೃಪಾಲನಾತನ
ನಂದನಿಗೆ ತಾ ಸಖನು ಚಿತ್ತೈಸೆನ್ನ ಬಿನ್ನಪವ ।೨೬।

ಕ್ಷಿತಿಪ ಭೀಮ ನೃಪಾಲನಾತನ
ಸತಿಸುತರು ಬಾಂಧವ ಸಹೋದರ
ರತಿಶಯರು ನಿಮ್ಮಯ ಕುಮಾರರು ಕುಶಲರಿಂದಿನಲಿ
ಕ್ಷಿತಿಯನಗಲುತ ನಳನೃಪತಿ ನಿಜ
ಸತಿಸಹಿತ ವನಕೈದಿದುದ ಕೇ
ಳುತಲಿ ನಿಮ್ಮವರೆಲ್ಲ ಶೋಕಾಬ್ಧಿಯಲಿ ಮುಳುಗಿಹರು ।೨೭।

ಘೋರತರಶೋಕವನು ಸೈರಿಸ
ಲಾರದಾ ಸತಿಪತಿಗಳಿಬ್ಬರು
ಸೋರುತಿಹ ಕಂಬನಿಗಳಲಿ ಕರೆದೆಮ್ಮ ಕಳುಹಿದರು
ಧಾರಿಣಿಯಲರಸುತಲಿ ಬಂದೆವು
ವಾರಿಜಾನನೆ ನಿಮ್ಮ ಕಂಡೆವು
ಸೇರಿತೆಮ್ಮಯ ಪುಣ್ಯವೆಂದು ಸುದೇವ ಕೈಮುಗಿದ ।೨೮।

ವನಿತೆ ಕೇಳುತ ಶೋಕಜಲದಲಿ
ನನೆದು ಬುಧಕುಲತಿಲಕನನು ಬಾ
ರೆನುತ ಮನ್ನಿಸಿ ತನ್ನವರನಡಿಗಡಿಗೆ ಬೆಸಗೊಳಲು
ವನಿತೆ ನೋಡಿದಳಾ ಸುದೇವನ
ಜನನಿಗರುಹಲು ಬಂದಳಾ ವಿ
ಪ್ರನನು ನೀವಾರೆನಲು ನುಡಿದನು ಬಂದ ಸಂಗತಿಯ ।೨೯।

ಕೇಳು ತಾಯೆ ವಿದರ್ಭಪತಿ ಭೂ
ಪಾಲನಾತ್ಮಜೆ ಪತಿಯೊಡನೆ ತ
ನ್ನಾಲಯವನುಳಿದು ವನಕೈದಿದಳೆನಲು ನೃಪ ಕೇಳಿ
ತಾಳಲಾರದೆ ನೋಡಿ ಕರೆತರ
ಹೇಳಿ ಕಳುಹಲು ಬಂದೆನಿಲ್ಲಿಗೆ
ಬಾಲೆ ದಮಯಂತಿಯಳ ಕಂಡೆನೆನುತ್ತ ಕೈಮುಗಿದ ।೩೦।

ಕೇಳಿ ಶಿವಶಿವಯೆನುತ ಶೋಕವ
ತಾಳಿ ತೆಗೆದಪ್ಪಿದಳು ಮಗಳೆ ವಿ
ಟಾಳಿಸಿತೆ ಸಿರಿ ರಾಜ್ಯಸಂಪದವೀ ಮಹಾವ್ಯಥೆಯ
ಭಾಳದಲಿ ವಿಧಿ ಬರೆದನೇ ಜನ
ಪಾಲ ನಳನೃಪನೆತ್ತ ಸರಿದನೊ
ಕಾಲಗತಿಯಿಂತಾಯಿತೇ ಹಾಯೆನುತ ಮರುಗಿದಳು ।೩೧।

ಬಾಲೆ ಬಿಡು ಶೋಕವನು ಭೀಮನೃ
ಪಾಲನರಸಿಗೆ ತಂಗಿ ತಾ ತ
ನ್ನಾಲಯದಿ ಕಡುನೊಂದೆ ಮಗಳೇ ಸಾಕು ನಮ್ಮೊಡನೆ
ಪೇಳದಿಹರೆ ಸುನಂದನೆಗೆ ಸಮ
ಪಾಳಿ ನೀನೆಮಗೆಂದು ತಳ್ಕಿಸಿ
ಪಾಳಿಸಿದಳತಿ ಕರುಣದಲಿ ದಮಯಂತಿಯನು ಜನನಿ ।೩೨।

ಕಿರಿಯ ತಂದೆ ಸುಬಾಹು ಮರುಗಿದ
ವರಕುವರಿ ದಮಯಂತಿ ನಿನ್ನಯ
ಪುರುಷನಿಲ್ಲದೆ ಚಿಂತೆಯಿಂದೆಲ್ಲವನು ನೀ ತೊರೆದು
ಕರಗಿ ಕಂದಿದೆ ಮಗಳೆ ತಾನಿಂ
ತರಿದುದಿಲ್ಲಲ ನಿನ್ನ ಪುರುಷನ
ಕರೆಸಿ ಕೊಡುವೆನು ನಾನು ಚಿಂತಿಸಬೇಡ ನೀನೆಂದ ।೩೩।

ತರಳೆ ಬಾರೆಂದೆನುತ ಕಣ್ಣಿನೊ
ಳೊರೆವ ಕಂಬನಿಗಳನು ಸೆರಗಿನೊ
ಳೊರಸಿ ದಮಯಂತಿಯನು ಮನ್ನಿಸಿ ಬಂದನೋಲಗಕೆ
ಕರೆಸಿದನು ಭೂಸುರ ಸುದೇವನ
ನಿರುತ ಮಣಿಭೂಷಣಗಳಿಂದುಪ
ಚರಿಸಿ ಕಳುಹಲು ಬಂದ ಭೀಮನೃಪಾಲನೋಲಗಕೆ ।೩೪।

ಅರಸ ಕೇಳು ವಿದರ್ಭಪತಿ ಮನ
ಮರುಗುತಿರಲಾ ಸಮಯದಲಿ ಭೂ
ಸುರ ಸುದೇವನು ಬಂದು ಕೈಮುಗಿದೆಂದನೀ ಹದನ
ತರುಣಿ ದಮಯಂತಿಯನು ಕಂಡೆನು
ಹರುಷ ಮಿಗಲಾ ಚೈದ್ಯಪುರದಲಿ
ವರಜನನಿ ಚಿಕ್ಕಮ್ಮನಲ್ಲಿಹಳೆಂದನಾ ವಿಬುಧ ।೩೫।

ಕಂಡು ಮಾತಾಡಿದೆನು ಸತಿಯಳ
ಮಂಡೆ ಮಾಸಿದೆ ಮಲಿನ ವಸನದೆ
ಗಂಡನಗಲಿದ ಚಿಂತೆಯಲಿ ಮುಖಬಾಡಿ ದೇಹವನು
ದಂಡಿಸಿದಳನ್ನದಲಿ ಮನ ಮುರಿ
ಗೊಂಡುದಾ ಸತಿಗಿನಿಯನನು ನೆರೆ
ಕಂಡು ಹೇಳುವವರಾರೆನುತ ಮರುಗುವಳು ಮನದೊಳಗೆ ।೩೬।

ಕೇಳುತರಸನ ವದನಕಾಂತಿ ವಿ
ಶಾಲವಾದುದು ಮನದಿ ಹರುಷವ
ತಾಳಿ ಪೊಂಪುಳಿವೋಗಿ ಭೀಮನೃಪಾಲ ಕರೆಸಿದನು
ಬಾಲೆಯರ ತನ್ನಾಪ್ತ ಸಚಿವರ
ಮೇಳದಲಿ ನಿಜಸುತೆಯ ಕರೆತರ
ಹೇಳಿ ರತ್ನಾಭರಣಗಳನಿತ್ತವರ ಕಳುಹಿದನು ।೩೭।

ಬಂದರಲ್ಲಿಗೆ ಚೈದ್ಯನೃಪತಿಯ
ನಂದು ಕಾಣಿಸಿಕೊಂಡರವರನು
ಮಂದಿರದ ಸುಕ್ಷೇಮವನು ಕೇಳಿದರೆ ಹೇಳಿದರು
ಇಂದುಮುಖಿ ದಮಯಂತಿಯನು ಕಳು
ಹೆಂದು ಭೀಮನೃಪಾಲ ಹರುಷದೊ
ಳಿಂದು ನಿಮಗುಡುಗೊರೆಗಳನು ಕಳುಹಿದನು ಕೇಳೆಂದ ।೩೮।

ಅರಸ ಕೇಳು ಸುಬಾಹು ಭೂಪತಿ
ಕರೆಸಿದನು ಮಂತ್ರಿಗಳ ಭೀಮನ
ಪುರಕೆ ಪಯಣವ ಮಾಡಿದನು ದಮಯಂತಿಯನು ಕರೆದು
ತರುಣಿ ನೀ ನಮ್ಮಲ್ಲಿ ತಿಂಗಳು
ಹೊರೆದೆ ದೇಹವ ಕಷ್ಟದಲ್ಲಿಂ
ದುರುತರದ ಪ್ರೇಮದಲಿ ಕೊಟ್ಟನು ಸಕಲ ಭೂಷಣವ ।೩೯।

ತರಿಸಿದನು ದಂಡಿಗೆಯೊಳಗೆ ಕು
ಳ್ಳಿರಿಸಿ ಸತಿಯರ ಗಡಣದಲಿ ಮಂ
ದಿರವ ಹೊರವಂಟರಸನೇರಿದ ಗಜದ ಕಂಧರವ
ಮೆರೆವ ನಾನಾ ವಾದ್ಯರಭಸದಿ
ಕರಿ ತುರಗ ಕಾಲಾಳ ಸಂದಣಿ
ಯುರವಣಿಸೆ ನಡೆತಂದು ಹೊಕ್ಕ ವಿದರ್ಭಪಟ್ಟಣವ ।೪೦।

ದೂತರೈದಿದರೊಸಗೆಯಲಿ ಜನ
ಜಾತ ನಲಿಯಲು ಬಂದು ಬೇಗದಿ
ಭೂತಳೇಂದ್ರಗೆ ಕೈಮುಗಿದು ದಮಯಂತಿ ಬಂದಳೆನೆ
ಮಾತ ಕೇಳಿದನದನು ಬಲಸಂ
ಗಾತಲೈತಂದವರ ಕಂಡತಿ
ಪ್ರೀತಿಯಿಂ ತಕ್ಕೈಸಿ ಕರೆತಂದನು ನಿಜಾಲಯಕೆ ।೪೧।

ಅವನಿಪತಿ ಕೇಳಾ ಪುರದೊಳು
ತ್ಸವವನದನೇನೆಂಬೆನಂದಿನ
ದಿವಸದೊಳಗರಮನೆಯೊಳಾ ದಮಯಂತಿಯನು ಜನನಿ
ತವಕದಿಂ ಬಿಗಿಯಪ್ಪಿದಳು ಬಾಂ
ಧವರು ಸಂತೋಷಿಸಿದರನಿಬರು
ಯುವತಿಯರು ನಿಜತನಯರಾಲಿಂಗಿಸಿದರಂಗನೆಯ ।೪೨।

ಮಗನ ನೋಡಿದಳಿಂದ್ರಸೇನನ
ತೆಗೆದು ತಕ್ಕೈಸಿದಳು ಕರೆದಳು
ಮಗಳ ಚಂದ್ರಾಸ್ಯಳನು ತೊಡೆಯೊಳಗಿಟ್ಟು ಮಮತೆಯಲಿ
ಮೊಗವನೀಕ್ಷಿಸಿ ಮೊಲೆಗಳಲಿ ತೊರೆ
ದುಗುವ ಹಾಲಿನ ಜನನಿ ಮಿಗೆ ನೀ
ರೊಗುವ ಕಣ್ಣೀರಿನಲಿ ಸಂತೈಸಿದಳು ನಿಜಸುತರ ।೪೩।

ಕಂತುಪಿತನೊಲುಮೆಯಲಿ ಧರಣೀ
ಕಾಂತ ಭೀಮನೃಪಾಲ ಬಾಂಧವ
ಸಂತತಿಯನಾದರಿಸಿ ಕಳುಹಿದನವರನುಚಿತದಲಿ
ಸಂತತವು ನಿಜಪತಿಯನಗಲಿದ
ಚಿಂತೆಯಲಿ ಮನಗುಂದಿದಳು ದಮ
ಯಂತಿ ನೆನೆಯುತಲಿರ್ದಳಾ ವನಪುರದ ಚೆನ್ನಿಗನ ।೪೪।

* * * *

# ಎಂಟನೆಯ ಸಂಧಿ

ಸುರರ ದುಂದುಭಿ ಮೊಳಗೆ ಧರಣೀ
ಸುರರುಲಿಯೆ ಮುರಹರನ ಕರುಣದಿ
ತರುಣಿ ದಮಯಂತಿಯಳನೊಡಗೂಡಿದನು ನಳನೃಪತಿ ॥

ಕೇಳಿದ್ಯೆ ರಾಜೇಂದ್ರ ಧರ್ಮಜನೃ
ಪಾಲ ತೊರೆದಳು ಸಕಲ ವಿಭವವ
ಧೂಳಿ ಮುಸುಕಿದ ಮುಡಿಯ ಮಾಸಿದ ವಸನಗಳ ನೋಡಿ
ಕೇಳಿದಳು ಪೂರ್ವೋತ್ತರವ ಭೂ
ಪಾಲನವನಿಯನುಳಿದು ನಿನ್ನ ವ
ನಾಲಯದೊಳೆಂತಗಲಿದನು ಹೇಳೆಂದಳಾ ಜನನಿ ।೧।

ಕಪಟದಲಿ ಪುಷ್ಕರನು ರಾಜ್ಯವ
ನಪಹರಿಸಿದನು ಜೂಜಿನಲಿ ನಳ
ನೃಪತಿ ಸೋತಾರಣ್ಯಕೈದಿದನೊಂದು ವಸ್ತ್ರದಲಿ
ಗುಪಿತದಿಂ ಬರೆ ಮುಂದೆ ಪಕ್ಷಿಗ
ಳುಪಮೆಯಲಿ ಕೊಂಡೊಯ್ಯೆ ವಸನವ
ಕೃಪಣತನದಲಿ ತನ್ನ ಸೀರೆಯೊಳೊಯ್ದನರ್ಧವನು ।೨।

ಮರೆದು ಮಲಗಿದೆ ರಾತ್ರಿಯಲಿ ಎ
ಚ್ಚರಿಸದೇ ನೃಪ ತೆರಳಿದನು ಕಾ
ತರಿಸಿ ಕಂಬನಿಯೊಳಗೆ ಬಂದೆನು ಚೈದ್ಯನಗರಿಯಲಿ
ಕರುಣಿ ಚಿಕ್ಕಮ್ಮನಲಿ ತಿಂಗಳು
ಹೊರೆದೆನೀ ದೇಹವನು ಇಲ್ಲಿಗೆ
ಕರೆಸಿದಿರಿ ನೀವೆನುತ ಕಂಬನಿದುಂಬಿದಳು ತರಳೆ ।೩।

ಏನನೆಂಬೆನು ತನ್ನ ಪುಣ್ಯದ
ಹಾನಿಯನು ಎಲೆ ತಾಯೆ ಲೋಕದ
ಮಾನಿನಿಯೊಳಾರುಂಟು ಎನ್ನವೊಲ್ ತೊಳಲಿ ಬಳಲಿದರು
ದಾನವಾಮರರೊಳಗೆ ಕಾಣೆ ಸ
ಮಾನರನು ನಳನೃಪಗೆ ಇನ್ನಿದ
ಕೇನ ಮಾಡುವೆನೆನುತ ಕಂಬನಿದುಂಬಿದಳು ತರುಣಿ ।೪।

ಆರಿಗೆರಡೆಣಿಸಿದೆನೊ ಹಿರಿಯರ
ಗಾರುಗೆಡಿಸಿದೆನೊ ವೃಥಾ ಮು
ನ್ನಾರ ನೋಂಪಿಗಪಾರವಿಘ್ನವ ಮಾಡಿ ಕೆಡಿಸಿದೆನೊ
ಆರನಳಲಿಸಿದೆನೊ ತಪೋವ್ರತ
ರಾರ ಜರೆದೆನೊ ತನ್ನ ನಿಜಸಂ
ಸಾರವೀ ತೆರನಾಯ್ತು ಶಿವಶಿವಯೆನುತ ಮರುಗಿದಳು ।೫।

ಕ್ಷಿತಿಯೊಳೆಲ್ಲಿಹನೋ ಪರಸ್ತ್ರೀ
ರತಿಗೆ ಮನಸೋತನೋ ತಪಸಿನ
ವ್ರತವ ಕೈಕೊಂಡನೋ ದನುಜರ ಬಲೆಗೆ ಸಿಲುಕಿದನೊ
ವಿತಳಕಿಳಿದನೊ ಚೆಲುವಿನಮರಾ
ವತಿಗೆ ನಡೆದನೊ ತೊರೆದು ನಳಭೂ
ಪತಿಯ ಕಾಣೆನು ತನಗೆ ಗತಿಯೇನೆಂದಳಿಂದುಮುಖಿ ।೬।

ಪತಿವಿಹೀನೆಗೆ ಸಲುವುದೇ ಸು
ವ್ರತ ಸುಭೋಜನ ಸೌಖ್ಯ ಸುಖ ಸಂ
ಗತಿಗಳುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ
ಸತಿಯರಿಗೆ ಪತಿದೈವವೆಂದಾ
ಶ್ರುತಿ ವಚನವಾಡುವುದು ತನಗಾ
ಪತಿಯನಗಲಿದ ಬಳಿಕ ಗತಿಯಲ್ಲೆಂದಳಿಂದುಮುಖಿ ।೭।

ಧರೆಯೊಳೆಲ್ಲಿಹನೋ ವಿಚಾರಿಸಿ
ಕರೆಸಿಕೊಡು ಎಲೆ ತಾಯೆ ಎನ್ನಯ
ಪುರುಷನಿಲ್ಲದ ಬಳಿಕ ಬಿಡುವೆನು ತನುವನೆಂದೆನಲು
ಮರುಗಿದಳು ಮಗಳೆಂದ ಮಾತಿಗೆ
ಕರಗಿ ಕಂಬನಿದೊಡೆದು ತನ್ನಯ
ಪುರುಷನೊಡನಿಂತೆನಲು ಭೀಮನೃಪಾಲ ಚಿಂತಿಸಿದ ।೮।

ಅರಸ ಕೇಳು ವಿದರ್ಭ ಭೂಪತಿ
ಕರೆಸಿದನು ಭೂಸುರರನವರಿಗೆ
ಪರಮವಸ್ತುವನಿತ್ತು ಕಳುಹಿದ ನಿಷಧಪತಿಯಿರವ
ಶರಧಿಮೇರೆಯೊಳೆಲ್ಲ ಭೇದಿಸಿ
ಕರೆದು ತಾರೆನಲವರು ಬರುತಿರೆ
ಕರೆಸಿದಳು ದಮಯಂತಿಯವರೊಡನೆಂದಳೀ ಮಾತ ।೯।

ನಳನೃಪತಿ ನಿಜರಾಜತೇಜವ
ನುಳಿದು ತಾ ಪ್ರತಿರೂಪುದಾಳಿಹ
ನಿಳೆಯೊಳಗ್ಗದ ಸಭೆಯೊಳಗೆ ನೀವೆಂಬುದೀ ನುಡಿಯ
ಹಳುವದಲಿ ಸತಿಯುಟ್ಟ ಸೀರೆಯ
ಸೆಳೆಯುತರ್ಧವ ಕೊಂಡು ನಾರಿಯ
ಕಳೆದು ಹೋದವರುಂಟೆಯೆನಲುತ್ತರವ ಪೇಳುವನು ।೧೦।

ಆ ನುಡಿಯ ತಂದೆನಗೆ ನೀವನು
ಮಾನವಿಲ್ಲದೆ ಪೇಳೆನುತ ಸ
ನ್ಮಾನದಿಂದ ಬೀಳ್ಕೊಟ್ಟಳಂಗನೆ ತೆರಳಿದರು ಬಳಿಕ
ಮಾನವೇಂದ್ರರ ಸಭೆಯ ನೋಡಿ ನಿ
ಧಾನಿಸುತ ನಾನಾ ದಿಗಂತ
ಸ್ಥಾನದಲಿ ನಗರಿಗಳ ಭೇದಿಸುತ್ತೈದಿದರು ಪಥವ ।೧೧।

ಇಳೆಯಮರರಲ್ಲಲ್ಲಿ ಗಿರಿವನ
ಗಳ ನಿರೀಕ್ಷಿಸಿ ಕೆಲವು ಋಷಿಗಳ
ನಿಳಯಗಳ ನೋಡುತ್ತ ಕಾನನಗಳೆದು ಬೇಗದಲಿ
ಜಲಧಿ ಮೇರೆಯ ಮಧ್ಯದಲಿ ಭೂ
ವಳಯವೆಲ್ಲವ ಶೋಧಿಸುತ ತನು
ಬಳಲಿಕೆಯ ಭಾವಿಸದೆ ನಡೆದರು ಮುಂದೆ ಪಥವಿಡಿದು ।೧೨।

ಮುಂದೆ ಬರುತಿರೆ ಕಂಡರೊಬ್ಬನ
ಸಂದ ಯಾಚಕ ಭೂಸುರನನೆ
ಲ್ಲಿಂದ ಬಂದಿರಿಯೆನಲಯೋಧ್ಯಾನಗರದಿಂದೆನಲು
ಕುಂದದಲ್ಲಿ ವಿಶೇಷವೇನುಂ
ಟೆಂದೆನಲು ಪೇಳಿದನು ಮುಖವಹು
ದೆಂದ ವಿಪ್ರನ ಮಾತಿನಿಂದೈದಿದರಯೋಧ್ಯೆಯನು ।೧೩।

ಮರುದಿವಸ ಋತುಪರ್ಣ ಮುನಿಮು
ಖ್ಯರು ಸಹಿತಲೋಲಗದೊಳಿರೆ ಕಂ
ಡರು ಮಹಾಸಭೆಯೊಳಗೆ ಹೊಕ್ಕರು ನಿಂದು ಕೈ ನೆಗಹಿ
ಹಿರಿಯರಿದೆ ಸಾಮಾಜಿಕರು ಸ
ಚ್ಚರಿತರಿದೆಲಾ ಕೇಳಿ ನೀವೆಂ
ದುರುತರವ ಗಂಭೀರ ವಾಕ್ಯದೊಳೆಂದನಾ ವಿಪ್ರ ।೧೪।

ಹಳುವದಲಿ ಬಂದಲಸಿ ಮಲಗಿದ
ಕುಲಸತಿಯ ವಸನದೊಳಗರ್ಧವ
ಕಳೆದುಕೊಂಡೊಯ್ದಗಲಿ ಪೋದವರುಂಟೆ ರಾತ್ರಿಯಲಿ
ಇಳೆಯನಾಳುವ ನೃಪರ ಸತ್ಯದ
ಬಳಕೆಗಿದು ಲೇಸಲ್ಲವೆನೆ ಮನ
ವಳುಕಿ ನಸುನಗೆಯಿಂದ ನುಡಿದನು ಒಲಿದು ಬಾಹುಕನು ।೧೫।

ಕ್ಷಿತಿಯಮರರೆಲ್ಲಿಂದ ಬಂದಿರಿ
ಸತಿಯನಗಲಿದ ಬಾಹಿರನು ಅವ
ಪತಿಯೆ ಸಾಕಂತಿರಲಿ ಬಿಡು ಋತುಪರ್ಣನೋಲಗದಿ
ಅತಿಶಯದ ನುಡಿಗೇಳ್ದೆವಕಟಾ
ಸತಿಗೆ ವಂಚನೆಯಲ್ಲವದು ನಿಜ
ಪತಿಗೆ ಕೊರತೆಯದೆಂದು ಸೂಚಿಸಿ ನುಡಿದ ವಿಪ್ರರಿಗೆ ।೧೬।

ಈತನಾರು ಕುರೂಪಿ ನೈಷಧ
ನೀತನೋ ಸಭೆಯೊಳಗೆ ತಾನೀ
ಮಾತನಾಡಲದೇಕೆ ಸಂಶಯವೆನುತ ಮನದೊಳಗೆ
ದೂತರಾಲೋಚಿಸುತ ಬಂದರು
ಭೂತಳಾಧಿಪ ಭೀಮನೃಪ ಸಂ
ಜಾತೆಯನು ಕಂಡೆರಗಿ ಕೈಮುಗಿದೆಂದರೀ ಹದನ ।೧೭।

ದೇವಿಯರು ಚಿತ್ತೈಸುವುದು ಭುವ
ನಾವಳಿಗಳೆಲ್ಲವನು ನೋಡಿದು
ನಾವು ಮುಂದೈತರಲು ಕಂಡೆವಯೋಧ್ಯನಗರಿಯನು
ಭೂವರನ ಋತುಪರ್ಣರಾಯನ
ಸೇವೆಯಲ್ಲಿ ಕುರೂಪಿಯೋರ್ವನು
ಜೀವಸಖನಾತಂಗೆ ಬಾಹುಕನೆಂಬ ನಾಮದಲಿ ।೧೮।

ತುರಗ ನಿಕರದ ಶಿಕ್ಷೆಯಲಿ ಮಂ
ದಿರದ ಬಾಣಸಿತನದ ಕೆಲಸದಿ
ನೆರೆ ನಿಪುಣನೆಂದೆನಿಸಿಕೊಂಡಿಹ ನೃಪನ ಸಭೆಯೊಳಗೆ
ಪಶುತವಿಸಿ ನೀವೆಂದ ಮಾತನು
ವರಸಭಾಮಧ್ಯದಲಿ ನುಡಿಯ
ಲ್ಕಿರದೆ ತಾನೀ ಮಾತನೆಂದನು ನಗುತ ಬಾಹುಕನು ।೧೯।

ಸತಿಗೆ ವಂಚನೆಗೈದ ಪತಿ ತಾ
ಮತಿವಿಕಳನಂತಿರಲಿ ಭೂಸುರ
ಪತಿಯೆ ಕೇಳಾ ಸತಿಗೆ ಭಂಗವೆ ಪತಿಗೆ ಕೊರತೆ ಕಣಾ
ಪತಿವ್ರತವನಾಚರಿಸುವಳು ನಿಜ
ಪತಿಯ ಗುಣದೋಷಗಳನೆಣಿಪಳೆ
ಗತಿಗೆ ಕಾರಣ ಸತ್ಯವೇ ತನಗೆಂದನವ ನಗುತ ।೨೦।

ಪತಿಯ ತಪ್ಪೆಣಿಸುವ ಸತಿ ಪತಿ
ವ್ರತೆಯೆ ಧರಣಿಯ ಪಾಲಿಸುವ ಜನ
ಪತಿಯ ನಿಂದಿಸುವಾತ ಸೇವಕನೇ ನಿದಾನಿಸಲು
ಪಿತನ ವಾಕ್ಯವನತಿಗಳೆವವನು
ಸುತನೆ ಗುರುವಿನ ಮಾತನೆಣಿಸದ
ಪತಿತ ಪಾತಕಿ ಶಿಷ್ಯನೇ ತಾನೆಂದ ಬಾಹುಕನು ।೨೧।

ಎನಲು ತಲೆದೂಗಿದಳು ಈ ಮಾ
ತಿನಲಿ ಸಂಶಯವಿಲ್ಲದಿಹುದೆಂ
ದೆನುತ ಕಂಬನಿದುಂಬಿದಳು ದಮಯಂತಿ ಮನದೊಳಗೆ
ಇನಿಯನಹುದಾತನ ಪರೀಕ್ಷೆಗೆ
ನೆನೆಯಬೇಕೆಂದನುವನೆಂದಾ
ವನಿತೆ ತಂದೆಯನುಜ್ಞೆಯಲಿ ಕರೆದಳು ಸುದೇವನನು ।೨೨।

ಇಳೆಯಮರ ಬಾರೆಂದು ವಿವರವ
ತಿಳುಹಿ ಪಯಣವ ಮಾಡಿ ಕಳುಹಲು
ಹೊಳಲ ಹೊರವಂಟನು ಸುದೇವನು ಹಲವು ಯೋಜನವ
ಕಳೆದು ಬರುತಿರೆ ಮುಂದೆ ಕಂಡನು
ಲಲಿತ ರತ್ನಪ್ರಭೆಯ ಗೋಪುರ
ಹೊಳೆವಯೋಧ್ಯಾಪುರವನೀಕ್ಷಿಸಿ ಹೊಕ್ಕನವನಂದು ।೨೩।

ಇಟ್ಟ ಫಣೆಯೊಳಗೆಸೆವ ಮಟ್ಟಿಯ
ತೊಟ್ಟ ಹೊಸ ಯಜ್ಞೋಪವೀತದ
ಕಟ್ಟಿಯಿರುಕಿದ ಕಕ್ಷಪಾಳದ ಬೆರಳ ಜಪಸರದ
ಉಟ್ಟ ಧೋತ್ರದ ಬಳಲುಗಚ್ಚೆಯ
ಸೃಷ್ಟಿಗಚ್ಚರಿ ರೂಪಿನಲಿ ಪರ
ಮೇಷ್ಠಿಯಂದದಿ ಬಂದನಾ ಋತುಪರ್ಣನೋಲಗಕೆ ।೨೪।

ಆರು ನೀವೆಲ್ಲಿಂದ ಬಂದಿರಿ
ದೂರದೇಶದ ಹಿರಿಯರಿಳೆಯೊಳು
ಕಾರಣವದೇನಿರುವುದಲ್ಲಿ ವಿಶೇಷವೇನೆನಲು
ಭೂರಮಣ ಕೇಳವನಿಯಲಿ ಸಂ
ಚಾರಿಸುತ ಬಂದೆವು ವಿದರ್ಭಕೆ
ಭೂರಿನೃಪರೈತರುತಲಿದೆ ಚತುರಂಗಬಲಸಹಿತ ।೨೫।

ದೇಶದೇಶದ ಯಾಚಕರು ಧರ
ಣೀಶರುನ್ನತ ತುರಗ ಗಜ ರಥ
ಭೂಸುರರು ಮಂತ್ರಿಗಳು ದೈವಜ್ಞರು ಸುಗಾಯಕರು
ಭಾಸುರದ ತೇಜದಲಿ ಜನ ಸಂ
ತೋಷದಲಿ ನಡೆತರುತಲಿದೆ ಪರ
ವಾಸುದೇವನೆ ಬಲ್ಲ ದಮಯಂತಿಯ ಸ್ವಯಂವರವ ।೨೬।

ಶಯನದಲಿ ಮಲಗಿದ ಸತಿಯನಡ
ವಿಯಲಿ ನಳನೃಪನಗಲಿ ಹೋದನು
ನಯವಿಹೀನಳಿಗಾಗಿ ರಚಿಸಿದರಾ ಸ್ವಯಂವರವ
ಪಯಣ ನಿಮಗುಂಟೇಗಳೆನೆ ನೃಪ
ಬಯಸಿ ಹೆಣ್ಣಿನ ಮೋಹದಲಿ ವಾ
ಜಿಯ ವರೂಥಕೆ ಹೂಡ ಹೇಳಿದ ಕರೆಸಿ ಬಾಹುಕನ ।೨೭।

ಹೈ ಹಸಾದವೆನುತ್ತ ವಂದಿಸಿ
ಬಾಹುಕನು ಮಂದಿರಕೆ ಬಂದು ವಿ
ವಾಹವುಂಟೇ ಮರಳಿ ದಮಯಂತಿಗೆ ಜಗನ್ನಾಥ
ಈ ಹದನವಾರಿಂದಲಾದುದೊ
ದ್ರೋಹಿಯಾದ ದಮಯಂತಿ ಇದು ಸಂ
ದೇಹವಾಗಿದೆ ಎನುತ ಚಿಂತಿಸಿ ಬಂದನರಮನೆಗೆ ।೨೮।

ಲಾಯದೊಳಗುತ್ತಮದ ತೇಜಿಯ
ನಾಯ್ದು ಹೂಡಿದ ರಥಕೆ ಸೇರಿಸಿ
ವಾಯುವೇಗದ ತೇರ ನಿಲಿಸಿದ ತಂದು ನೃಪನೆಡೆಗೆ
ರಾಯನೇರಲು ಕರಿ ತುರಗ ರಥ
ಪಾಯದಳ ಸಂದಣಿಸಿದುದು ನೆಲ
ಬಾಯಬಿಡೆ ಹೊರವಂಟ ನೃಪ ಘನವಾದ್ಯ ರಭಸದಲಿ ।೨೯।

ಜನಪನೆಂದನು ಬಾಹುಕಗೆ ಮಾ
ನಿನಿಯನೀಕ್ಷಿಸಬೇಕು ನಿಲ್ಲದು
ಮನವಿದೊಂದೇ ದಿನಕೆ ನಡೆಸು ವಿದರ್ಭಪುರವರಕೆ
ಎನಲು ನಕ್ಕನು ಮನದೊಳಗೆ ತ
ನ್ನಿನಿಯಳಿಗೆ ವಿಧಿ ಬರೆದನೇ ಶಾ
ಸನವ ಮೀರುವರಾರೆನುತ ಮರುಗಿದನು ನಳನೃಪತಿ ।೩೦।

ಕರದ ವಾಘೆಯ ಸಡಿಲ ಬಿಡೆ ಮುಂ
ಬರಿದು ಚಿಮ್ಮಿದುವಡಿಗಡಿಗೆ ರಥ
ತುರಗ ಹಾಯ್ದುದು ತೇರು ಮುಂದಕೆ ಪವನವೇಗದಲಿ
ಭರದೊಳೈತರೆ ನೃಪನ ಹಚ್ಚಡ
ಧರೆಗೆ ಬೀಳಲು ಸಾರಥಿಯನೆ
ಚ್ಚರಿಸಿದನು ಋತುಪರ್ಣನಿದಕಿನ್ನೇನು ಹದನೆನುತ ।೩೧।

ಜೀಯ ಚಿತ್ತೈಸುರವಣಿಸಿ ನಿ
ರ್ದಾಯದಲಿ ಹಿಂದುಳಿದುದಂಬರ
ವಾಯುಗತಿಯಲಿ ದಾಟಿ ಬಂದೆವು ಹಲವು ಯೋಜನವ
ಹೋಯಿತಾ ಮಾತೇಕೆ ನಡೆಯೆನೆ
ರಾಯ ಮೆಚ್ಚಿದ ಸಾರಥಿಯ ಬಿರು
ದಾಯಕನು ನೀನೆಂದು ಕೊಂಡಾಡಿದನು ಬಾಹುಕನ ।೩೨।

ಮುಂದೆ ಕಂಡನು ಬರುತಲಡವಿಯೊ
ಳೊಂದು ತಾರೆಯ ಮರನನದರೊಳು
ಸಂದ ಫಲಪರ್ಣಂಗಳೆಣಿಸದೆ ಸೂತ ಪೇಳೆನಲು
ಇಂದೆನಗೆ ಮತಿದೋರದವನಿಪ
ಕುಂದದೆನಗಿದ ಪೇಳು ನೀನೆನ
ಗೆಂದೊಡಾ ಸಾರಥಿಗೆ ಲೆಕ್ಕವನರುಹಿದನು ನೃಪತಿ ।೩೩।

ಇಳಿದು ರಥವನು ಬಂದು ವೃಕ್ಷದ
ಬಳಿಗೆ ನಿಂದಾ ಶಾಖೆಗಳಲಿಹ
ಫಲದ ಪರ್ಣಂಗಳೆಣಿಸಿದನಾ ಪದ್ಮಸಂಖ್ಯೆಯಲಿ
ಒಲಿದು ಲೆಕ್ಕವ ಕಂಡು ತಾ ಮನ
ನಲಿದು ನಳನೃಪ ಪುಷ್ಕರನ ತಾ
ಗೆಲುವ ಹದನಾಯ್ತೆನುತ ಬರೆ ಕಲಿಪುರುಷನಿದಿರಾದ ।೩೪।

ಎಲೆ ನೃಪಾಲಕ ನಿನ್ನ ಸತ್ಯದ
ನೆಲೆಯನೀಕ್ಷಿಸಬೇಕೆನುತ ಬಂ
ದಳಲಿಸಿದೆ ಹಿರಿದಾಗಿ ನೋಯದಿರಿನ್ನು ಚಿತ್ತದಲಿ
ತೊಲಗಿದೆನು ಇಂದಿನಲಿ ಶುಭ ಮಂ
ಗಳಕರವು ನಿನಗಪ್ಪುದೆನಲಾ
ನಳನೃಪತಿ ಖತಿಗೊಂಡು ಶಾಪವ ಕೊಡದೆ ಮನ್ನಿಸಿದ ।೩೫।

ಮಾನವಾಧಿಪ ಕೇಳು ಲೋಕಕೆ
ದೀನಜನಬಾಂಧವನು ನಳನೃಪ
ಕಾನನದೊಳವನತ್ತ ಕಳುಹಿಸಿ ಬಂದು ರಥವೇರಿ
ಆ ನರೇಂದ್ರಂಗಶ್ವಹೃದಯವ
ತಾನರುಹಿ ಆತನಲಿ ಪಡೆದನು
ಸಾನುರಾಗದಿ ಭೂರುಹದ ಹೃದಯವನು ನಿಮಿಷದಲಿ ।೩೬।

ಕರದ ವಾಘೆಯ ಕೊಂಡು ನೃಪಗೆ
ಚ್ಚರಿಸಿ ನೂಕಿದ ತೇಜಿಗಳು ಹೂಂ
ಕರಿಸಿ ಮನ ಮುಂಕೊಂಡು ಹಾಯ್ದುದು ಬಿಟ್ಟ ಸೂಟಿಯಲಿ
ಭರದ ಗಮನವನೇನನೆಂಬೆನು
ನೆರೆದ ಜನವಲ್ಲಲ್ಲಿ ನಿಂದುದು
ಧರೆಯೊಳೀ ಸಾರಥಿಗೆ ಸರಿಯಾರರಸ ಕೇಳೆಂದ ।೩೭।

ತುರಗ ಹೇಷಾರವದ ಗಾಳಿಯ
ಧರಧುರದ ಚೀತ್ಕೃತಿಯ ಸಾರಥಿ
ಯುರವಣೆಯ ರಥದಚ್ಚುಗಳ ಝೇಂಕಾರ ನಾದದಲಿ
ಭರದಿ ಕೆಂಧೂಳಿಡುತ ಬರಲಾ
ಪುರಜನರು ಸಂದಣಿಸಿ ನೋಡಲು
ಪರಿಚರರು ಬಂದರು ವಿದರ್ಭನೃಪಾಲಗರುಹಿದರು ।೩೮।

ಬಂದನೇ ಋತುಪರ್ಣನೆನುತಾ
ನಂದ ಮಿಗೆ ಕರೆಸಿದನು ಸಚಿವರ
ಮಂದಿಯನು ಕಳುಹಿಸಲು ಕರೆತಂದರು ನಿಜಾಲಯಕೆ
ಸಂದಣಿಯ ಪರಿಹರಿಸಿ ನೃಪ ಮುದ
ದಿಂದ ಬೇರರಮನೆಯೊಳುಲುಪೆಗ
ಳಿಂದಯೋಧ್ಯಾಪತಿಯ ಸತ್ಕರಿಸಿದನು ಭೀಮನೃಪ ।೩೯।

ಕೇಳಿದಳು ದಮಯಂತಿ ವಾರ್ತೆಯ
ತಾಳಿದಳು ಹರುಷವನು ಮನದಲಿ
ಫಾಲಲೋಚನನಿಂದ ಫಲಿಸಿತು ಪುಣ್ಯವೆನಗಿಂದು
ಬಾಲೆ ಕೇಳೆನಗಿಂದು ಶೋಕ
ಜ್ವಾಲೆ ಪರಿಹರವಾಯ್ತು ಮಂಗಳ
ದೇಳಿಗೆಯು ಪಸರಿಸಿತು ಶುಭಕರವೆಂದಳಿಂದುಮುಖಿ ।೪೦।

ಖಿನ್ನನಾದನು ಚಿತ್ತದಲಿ ಋತು
ಪರ್ಣ ಭೂಸುರನೆಂದ ಮಾತಿನ
ಬಿನ್ನಣಕೆ ಮರುಳಾಗಿ ಬಂದೆನು ಮೂಢನಾದೆನಲಾ
ಭಿನ್ನವಿಲ್ಲದೆ ಕೊಂಡ ನಾಚಿಕೆ
ಗಿನ್ನು ಹದನೇನೆನುತ ಗುಣಸಂ
ಪನ್ನ ಮರುಗಿದ ತನ್ನ ಮನದ ದುರಂತ ಚಿಂತೆಯಲಿ ।೪೧।

ಓಲಗವನಿತ್ತನು ವಿದರ್ಭ ನೃ
ಪಾಲ ಕರೆಸಿದ ಮಂತ್ರಿ ಬಾಂಧವ
ಜಾಲವನು ಋತುಪರ್ಣ ಬಂದನು ಬಾಹುಕನು ಸಹಿತ
ಸಾಲಮಣಿ ಪೀಠದಲಿ ಕುಳ್ಳಿರೆ
ಬಾಲೆಯರ ಸಂಗೀತ ನೃತ್ಯದ
ಕೇಳಮೇಳದಿ ರಂಜಿಸಿತು ಭೂಪಾಲನಾಸ್ಥಾನ ।೪೨।

ನಾರಿಯರ ಮರೆಗೊಂಡು ಸಭೆಯಲಿ
ಸಾರಥಿಯ ಕುಬ್ಜಾವತಾರವ
ನೋರೆಗಣ್ಣಿನೊಳೀಕ್ಷಿಸುವ ದಮಯಂತಿ ಮನದೊಳಗೆ
ಆರಿವನು ನಳನೃಪನ ಹೋಲುವ
ಚಾರುಚಿಹ್ನೆಗಳಿಲ್ಲ ತೋರ್ಕೆ ವಿ
ಕಾರವಾಗಿದೆ ರೂಪೆನುತ ಚಿಂತಿಸಿದಳಿಂದುಮುಖಿ ।೪೩।

ಒರೆದೊರೆದು ನೋಡಿದಳು ಸೂತನ
ಸಿರಿಮೊಗದ ಕಾಂತಿಯನು ಕಳೆಗುಂ
ದಿರುವ ಕಾಯವ ಕಪ್ಪಿನಿಂದುದುರಿರ್ದ ರೋಮದಲಿ
ಪರಿಕಿಸಲ್ಕೀ ರೂಪು ಕೈಕೊಂ
ಡಿರುವನೇ ನಳನೃಪತಿ ಶಿವಶಿವ
ಮುರಹರನು ತಾ ಬಲ್ಲನೆಂದುಮ್ಮಳಿಸಿದಳು ತರಳೆ ।೪೪।

ಹರೆದುದೋಲಗವಲ್ಲಿ ನಿಜಮಂ
ದಿರಕೆ ಬಂದಾಲೋಚಿಸುತ ಮಿಗೆ
ತರುಣಿಯರ ಕಳುಹಿಸಲು ಬಂದರು ಬಾಣಸಿನ ಮನೆಗೆ
ಇರವ ಕಂಡರು ಪಾಕದಲಿ ಕೈ
ಕರಣವನು ನೆರೆ ಸೂಪಕಾರನ
ಪರಿಯ ಹೊಗಳುತ ಬಂದು ಬಿನ್ನೈಸಿದರು ಭಾಮಿನಿಗೆ ।೪೫।

ತಾಯೆ ಚಿತ್ತೈಸಿನ್ನವನ ಕರ
ಣಾಯತನವೇನೆಂಬೆ ಲೋಕದ
ಸ್ತ್ರೀಯರೊಳಗಿನ್ನಿಲ್ಲ ರಚಿಸುವ ಶಾಕಪಾಕದಲಿ
ಮಾಯವನು ಮಿಗೆ ತಿಳಿಯಲರಿಯದು
ಪಾಯದಿಂದೀಕ್ಷಿಸಲು ಸಕಲ ರ
ಸಾಯನವು ಪರಿಪಕ್ವವಾಗಿದೆ ಪೇಳಲರಿದೆಮಗೆ ।೪೬।

ದಾದಿಯರು ಬಾಹುಕನ ಗುಣಗಳ
ಭೇದಿಸಿದರೊಂದೊಂದು ಬಗೆಯ ತ
ಳೋದರಿಗೆ ಬಿನ್ನೈಸೆ ನಿಶ್ಚೈಸಿದಳು ದಮಯಂತಿ
ಆದಡವ ನಳನಹುದು ಗುಣದಲಿ
ಭೇದಿಸುವೆನಿನ್ನೊಮ್ಮೆ ಎನುತ ವಿ
ನೋದದಿಂದಾಡುವ ಕುಮಾರರ ಕರೆಸಿದಳು ತರುಣಿ ।೪೭।

ತರಳರಿಗೆ ನೀರೆರೆದು ಕಾಂಚನ
ವರ ದುಕೂಲವನಿತ್ತು ದಿವ್ಯಾ
ಭರಣ ಭೂಷಿತರಾದ ತನಯರ ದಾದಿಯರ ಕೈಲಿ
ಪಿರಿದು ಕಳುಹಲು ಬಾಣಸಿನ ಮಂ
ದಿರದ ಬಾಗಿಲ ಮುಂದೆ ಬಿಡೆ ಸಂ
ಚರಿಸಿ ಸುಳಿದಾಡುವರ ಕಂಡನು ನೃಪತಿ ಹರುಷಿಸುತ ।೪೮।

ತರಳರನು ಪಿಡಿದೆತ್ತಿ ತೊಡೆಯೊಳ
ಗಿರಿಸಿ ಮುದ್ದಾಡಿದನು ನೋಡುತ
ಸುರಿವ ಕಂಬನಿಗಳಲಿ ಬಾಹುಕ ಮರುಗುತಿರಲಂದು
ಮರೆಯ ಜಾಲಂಧ್ರದಲಿ ಕಂಡಳು
ತರುಣಿ ನಳನೃಪನೀತನಹುದೆಂ
ದುರುತರದ ಪ್ರೇಮದಲಿ ಬಂದಳು ಜನನಿಯರಮನೆಗೆ ।೪೯।

ತಾಯೆ ಸಂಶಯವಿಲ್ಲ ನೈಷಧ
ರಾಯನೀತನು ಸೂತನಲ್ಲ ವಿ
ಡಾಯದಲಿ ಬಂದಿಹನು ನೋಡು ಕುರೂಪಿ ವೇಷದಲಿ
ರಾಯರೊಳಗಗ್ಗಳೆಯ ನಳನೃಪ
ಮಾಯವನು ತೋರಿಹನು ಇವನ ನಿ
ಜಾಯತವ ತಾ ಬಲ್ಲೆ ಕರೆಸೆಂದಳು ಸರೋಜಮುಖಿ ।೫೦।

ಧರಣಿಪತಿಯನುಮತದೊಳಾತನ
ಕರೆಸಿದಳು ನೃಪನರಸಿ ಬಾಹುಕ
ನಿರದೆ ಬಂದನು ರಾಜಮಂದಿರದಲ್ಲಿ ಕುಳ್ಳಿರಲು
ತರಳೆ ಮಾಸಿದ ಸೀರೆಯಲಿ ಗರ
ಗರಿಕೆ ತಪ್ಪಿದ ಚೆಲುವಿನಲಿ ನಿಂ
ದಿರಲು ಕಂಡನು ಸತಿಯ ತಲೆಬಾಗಿದನು ಲಜ್ಜೆಯಲಿ ।೫೧।

ಹಿಮಕರಾನ್ವಯತಿಲಕ ವಸುಧಾ
ರಮಣ ಪುಣ್ಯೋದಯ ಸುಭಾಷಿತ
ವಿಮಲಗುಣ ಚಾರಿತ್ರ ಸನ್ನುತ ಸತ್ಯಸಂಚಾರ
ಕುಮತಿ ಪುಷ್ಕರ ಮುನಿದನೇ ವಿ
ಕ್ರಮದರಿದ್ರತೆ ಬಂದುದೇ ಸಾ
ಕಮಿತ ಭುಜಬಲ ಪಾಲಿಸೆಂದಳು ಪತಿಗೆ ದಮಯಂತಿ ।೫೨।

ಮುನ್ನ ಮಾಡಿದ ಕರ್ಮಫಲ ಋತು
ಪರ್ಣನಲಿ ಸೇವೆಯನು ಮಾಡುವು
ದುನ್ನತಿಕೆಯಲಿ ಬಂದುದೇ ಮಿಗೆ ಸಾರ್ವಭೌಮರಿಗೆ
ತನ್ನ ಪುಣ್ಯದ ಹಾನಿ ತಾನಿದ
ಕಿನ್ನು ಬಳಲುವುದೇನು ಗುಣಸಂ
ಪನ್ನ ರಕ್ಷಿಸು ಸತಿಯನೆಂದೆರಗಿದಳು ಪದಯುಗಕೆ ।೫೩।

ತುರುಬ ಹಿಡಿದೆತ್ತಿದನು ಸತಿಯಳ
ಸುರಿವ ಕಂಬನಿದೊಡೆದು ನುಡಿದನು
ಬರಿದೆ ಚಿಂತಿಸಲೇಕೆ ಮಾನಿನಿ ಬಿಡು ಮನೋವ್ಯಥೆಯ
ಅರಿಯದವಳೇಂ ನೀನು ಲೋಕದ
ಸರಸಿಜಾಕ್ಷಿಯರೆಲ್ಲರಿಗೆ ನೀ
ಗುರುವಲಾ ಬರಿದೆನ್ನ ಬಯಸಲು ಬೇಡ ಹೋಗೆಂದ ।೫೪।

ವಿನಯಹೀನರು ತಾನು ಮನದಲಿ
ನೆನೆದು ತಪ್ಪಿದ ನಿರ್ದಯನು ಕಾ
ನನದಿ ನಿನ್ನನು ಬಿಸುಟು ಕಳೆದ ದುರಾತ್ಮ ಬಾಹಿರನ
ನೆನೆವರೇ ಬಿಡು ಮರುಳೆ ನಿನಗಿಂ
ದಿನಲಿ ಮಾಳ್ಪ ಪುನಸ್ಸ್ವಯಂವರ
ಮನಕೆ ಸರಿಬಂದವನ ನೀನೊಲಿಸೆಂದನಾ ನೃಪತಿ ।೫೫।

ಎನಲು ಕರ್ಣಂಗಳಿಗೆ ಸಬಳದ
ಮೊನೆಗಳಿರಿದಂತಾಗೆ ಸತಿ ಕ
ಣ್ಣಿನಲಿ ತುಂಬಿದಳುದ ಕವನು ಹರಹರ ಶಿವಾಯೆನುತ
ಎನಗೆ ಇನ್ನು ಪುನಸ್ಸ್ವಯಂವರ
ಮನದೊಳುಂಟೇ ನೀವು ಬರಬೇ
ಕೆನುತ ವಾರ್ತೆಯ ಕಲ್ಪಿಸಿದೆ ಕೇಳೆಂದಳಿಂದುಮುಖಿ ।೫೩।

ನಂಬಿದೆನು ಲೇಸಾಗಿ ಮನದೊಳ
ಗಿಂಬುಗೊಂಡುದು ವಿಕೃತರೂಪಿನ
ಡೊಂಬಿಯೇಕಿದು ಸಕಲ ಧರ್ಮ ವಿಚಾರವಂತರಿಗೆ
ಅಂಬುಜಾಕ್ಷನ ರೂಪಿನಲಿ ಪ್ರತಿ
ಬಿಂಬವಲ್ಲದೆ ನೀವು ಬಯಲಾ
ಡಂಬರದ ನುಡಿಯೇಕೆ ಸಾಕಿನ್ನೆಂದಳಿಂದುಮುಖಿ ।೫೭।

ನಡೆಯುತೆಡಹಿದ ಪಟ್ಟದಾನೆಯ
ಪಿಡಿದು ಕೊಲ್ಲುವರುಂಟೆ ನಂಬಿದ
ಮಡದಿಯಲ್ಲವೆ ತಾನು ಬಿರುನುಡಿಯೇಕೆ ನಳನೃಪತಿ
ಅಡವಿಯಲಿ ಕಡುನೊಂದು ದೇಹವ
ಬಿಡದೆ ಉಳುಹಿದೆನಿನ್ನು ಪ್ರಾಣದ
ಗೊಡವೆಯಿನ್ನೇಕೆನುತ ಕಂಬನಿದುಂಬಿದಳು ತರಳೆ ।೫೮।

ನೋಯೆ ನೊಂದಿಹ ಸತಿಯನಾಡಲು
ನ್ಯಾಯವೇನಿದು ನಿಮಗೆ ಕೇಳೆಲೆ
ರಾಯ ನಿಮ್ಮನು ನೋಡೆ ಕಳುಹಿದೆ ಚರರ ದಿಕ್ಕಿನಲಿ
ಮಾಯರೂಪಿದ ಕಾಣಲಾರದೆ
ಬಾಯ ಬಿಡುತಿರಲಿನ್ನಯೋಧ್ಯೆಯ
ರಾಯನಲಿ ನೂತನದ ಸಾರಥಿಯೆನಲು ಕೇಳಿದೆನು ।೫೯।

ಆಗ ಭೂಸುರಪತಿ ಸುದೇವನ
ಬೇಗಲಟ್ಟಿದೆ ನಿಮ್ಮ ಬಳಿಗೆ ಸ
ರಾಗದಿಂದುತ್ತರಕೆ ಪ್ರತ್ಯುತ್ತರವ ಪೇಳ್ದಿರಲು
ಈಗಲಿದು ಸಂಶಯವೆ ತಾನದ
ಕಾಗಿ ಕರೆಸಿ ಸ್ವಯಂವರವ ನಿಮ
ಗಾಗಿ ಪೇಳಿದೆನಿದರ ತಪ್ಪೇನೆಂದಳಿಂದುಮುಖಿ ।೬೦।

ಜನನುತನೆ ಕೇಳಾದಿಯಲಿ ಯೌ
ವನವ ನಿನಗೊಪ್ಪಿಸಿದೆನಲ್ಲದೆ
ತನುಮನೋವಾಕ್ಕಾಯ ಕರ್ಮಂಗಳಲಿ ತಾನೆರಡ
ನಿನಗೆ ನೆನೆದವಳಲ್ಲ ನೀನೇ
ನನಗೆ ಗತಿಯೆಂದಿಹುದನರಿಯಾ
ಜನಪ ರಕ್ಷಿಸು ಕೈಪಿಡಿದು ಸಲಹೆಂದಳಿಂದುಮುಖಿ ।೬೧।

ಇದಕೆ ಯಮ ವರುಣಾನಿಲೇಂದ್ರರು
ಮದನಜನಕನೆ ಸಾಕ್ಷಿಯೆನೆ ಮೇ
ಘದಲಿ ನುಡಿದನು ವಾಯು ನಳನೃಪನೊಡನೆ ಸತ್ಯವನು
ಚದುರ ಕೇಳ್ ದಮಯಂತಿ ಲೋಕದ
ಸುದತಿಯೇ ತಿಳಿ ಲೋಕಪಾವನೆ
ಇದಕೆ ಸಂಶಯವೇಕೆ ಪಾಲಿಸು ಸತಿಯ ನೀನೆಂದು ।೬೨।

ಪವನನಾಡಿದ ನುಡಿಯ ಕೈಕೊಂ
ಡವನಿಪತಿ ಬಿನ್ನೈಸಿದನು ಕೈ
ತವಕದಲಿ ಕಲಿಯಿಂದ ನೊಂದೆನು ನಿಮ್ಮ ದರುಶನದಿ
ಬವಣೆ ಹಿಂಗಿ ಕೃತಾರ್ಥನಾದೆನು
ಬುವಿಯೊಳಿನ್ನೆನುತ ಪಕ್ಷಿಯ
ಹವಣ ಮನದಲಿ ನೆನೆಯೆ ಬಂದುದು ದಿವ್ಯಮಯ ವಸನ ।೬೩।

ಧರಿಸಿದನು ನಳನಾ ದುಕೂಲವ
ಪರಿಹರಿಸಿತಾ ರೂಪು ಮುನ್ನಿನ
ಪರಮತೇಜದ ದಿವ್ಯತನುವಿನೊಳೆಸೆದು ರಂಜಿಸಲು
ಸುರರ ದುಂದುಭಿ ಮೊಳಗೆ ಮಲ್ಲಿಗೆ
ಯರಳ ಮಳೆ ಸೂಸಿದರು ಗಗನದಿ
ಸುರಸತಿಯರಕ್ಷತೆಯ ತಳಿದರು ಹರಸಿ ನಳನೃಪಗೆ ।೩೪।

ಸುರರು ಕೊಂಡಾಡಿದರು ಯಮ ಭಾ
ಸ್ಕರ ವಿರಿಂಚಾದಿಗಳುಲಿಯೆ ವರ
ತರುಣಿ ಬಂದೆರಗಿದಳು ಪತಿಯಂಘ್ರಿಯಲಿ ದಮಯಂತಿ
ಹರುಷದಲಿ ಬಿಗಿಯಪ್ಪಿದನು ಭೂ
ಸುರರು ಸಂಭ್ರಮಿಸಿದರು ವರಪುರ
ದರಸ ಚೆನ್ನಿಗರಾಯ ಸಲಹಿದನವರ ಕರುಣದಲಿ ।೩೫।

* * * *

## ಒಂಬತ್ತನೆಯ ಸಂಧಿ

ಕದನದಲಿ ಪುಷ್ಕರನ ಬಲವನು
ಸದೆದು ಜೂಜಿಂ ಗೆಲಿದು ರಾಜ್ಯವ
ಮುದದಿ ಪಾಲಿಸುತಿರ್ದನಾ ಸತಿಸಹಿತ ನಳನೃಪತಿ ॥

ಕೇಳು ಪಾಂಡುಕುಮಾರ ನಳಭೂ
ಪಾಲನಭ್ಯುದಯವನು ಮಂಗಳ
ದೇಳಿಗೆಯನೇನೆಂಬೆ ದಮಯಂತಿಯ ಮಹೋತ್ಸವವ
ಲೀಲೆಯಲಿ ಮಜ್ಜನವ ಮಾಡಿ ದು
ಕೂಲಮಣಿ ಭೂಷಣವ ಧರಿಸಿ ಚ
ಡಾಳಿಸುವ ಕಾಂತಿಯಲಿ ಸಿಂಹಾಸನದಿ ಕುಳ್ಳಿರ್ದ ।೧।

ಈತನಾರು ಪಿತಾಮಹನೊ ಪುರು
ಹೂತನೋ ಮನ್ಮಥನೊ ಲಕ್ಷ್ಮೀ
ನಾಥನೊ ಚಂದ್ರಮನೊ ಶಂಕರನೋ ಮಹಾದೇವ
ಈತನೇ ನಳನೃಪತಿ ಭೂ ವಿ
ಖ್ಯಾತನೆಲ್ಲಿಂದಿಲ್ಲಿ ಬಂದನು
ಪೂತು ಮುಝರೇ ಎನುತ ಕೊಂಡಾಡಿತು ನೃಪಸ್ತೋಮ ।೨।

ಬಂದು ಕಂಡುದು ನಿಖಿಳ ಪುರಜನ
ವಂದು ಕಾಣಿಕೆಗೊಟ್ಟು ಮುದದಲಿ
ಸಂದಣಿಸೆ ಋತುಪರ್ಣ ಬಂದನು ಮಂತ್ರಿ ಜನಸಹಿತ
ಸಂದ ಮಣಿಕಾಂಚನ ಸುವಸ್ತುವ
ತಂದು ಸಮುಖದೊಳಿರಿಸಿ ವಿನಯದಿ
ನಿಂದು ಬಿನ್ನೈಸಿದನು ಕರಗಳ ಮುಗಿದು ನಳನೃಪಗೆ ।೩।

ಸೋಮಕುಲ ನೃಪಸಾರ್ವಭೌಮ ಸ
ನಾಮ ಮಂಗಳನಿಳಯ ಜಿತಸಂ
ಗ್ರಾಮ ಧೀರ ವಿರೋಧಿಸಾಮಜಸಿಂಹ ದಯಶೀಲ
ತಾಮಸನು ಮತಿಗೇಡಿ ಮಾನವ
ಪಾಮರನ ಗುಣದೋಷವೆಣಿಸದೆ
ಪ್ರೇಮದಿಂದೊಲಿದೆನ್ನ ನೀ ಸಲಹೆಂದು ಕೈಮುಗಿದ ।೪।

ರೂಢಿಯಲಿ ನಾ ನಿಮ್ಮನರಿಯದ
ಮೂಢಮತಿಯವಿವೇಕಿ ತುರಗವ
ಹೂಡಿದಾಗಲೆ ರಥಕೆ ಆದಿಯೊಳರಿದೆನೇ ತಾನು
ಮಾಡಿದಪರಾಧಗಳನೊಂದನು
ನೋಡಲಾಗದು ಚಿತ್ತದಲಿ ಖಯ
ಖೋಡಿಯಿಲ್ಲದೆ ಸಲಹಬೇಕೆಂದೆರಗಿದನು ಪದಕೆ ।೫।

ಈ ಪರಿಯೊಳೆನಲಾ ನೃಪನ ಸಂ
ತಾಪವನು ಪರಿಹರಿಸಿ ನಳನೃಪ
ತಾ ಪಿರಿದು ಮಣಿಭೂಷಣಂಗಳನಿತ್ತು ನಸುನಗುತ
ಕೋಪವೆನಗಿಲ್ಲೆಂದಯೋಧ್ಯಾ
ಭೂಪನನು ಮನ್ನಿಸುವ ಸಮಯದಿ
ತಾಪ ರಸ ನೊಡಗೊಂಡು ಬಂದನು ಒಲಿದು ಮೈತ್ರೇಯ ।೬।

ಬಂದ ಮುನಿಗವನೀಶ ಚರಣ
ದ್ವಂದ್ವದಲಿ ಚಾಚಿದನು ಮಕುಟವ
ನಂದು ಪಿಡೆದೆತ್ತಿದನು ನಸುನಗತಲ್ಲಿ ಕುಳ್ಳಿರ್ದ
ಎಂದನೆಲೆ ನಳನೃಪತಿ ನಿನಗೆ ಮು
ಕುಂದನೊಲುಮೆಯು ಆವ ಕಾಲದಿ
ಸಂದಿರಲು ಇನ್ನಾವುದರಿದಿಲ್ಲೆಂದನಾ ಮುನಿಪ ।೭।

ಕಲಿಪುರುಷನಿಂದಾದುದಪಹತಿ
ಲಲನೆ ಪುತ್ರರನಗಲಿ ಕಷ್ಟವ
ಬಳಸಿದೆಯಲಾ ನೊಂದು ಸತ್ಯವ ಬಿಡದೆ ಸಂಚರಿಸಿ
ಸುಲಭನಾದೆ ಕುಲಾಂಗನೆಯ ವ್ರತ
ಫಲದ ಪುಣ್ಯೋದಯದಿ ನಿಜಸಿರಿ
ಫಲಿಸಿತಿನ್ನೀ ಲೋಕದಲಿ ನಿನಗಾರು ಸರಿಯೆಂದ ।೮।

ಹರಿಯ ನೆಲೆಗೆಡಿಸಿದನು ಪರಮೇ
ಶ್ವರನ ಭಿಕ್ಷವನೆತ್ತಿಸಿದ ಸರ
ಸಿರುಹಭವ ತಾ ಶಿರವ ಪೋಗಾಡಿದನು ಪೂರ್ವದಲಿ
ಕರುಣಹೀನನು ನಿನ್ನ ಸೋಂಕಲು
ತೆರನ ಕಾಣದೆ ಹಲವು ದಿನ ಕಾ
ತರಿಸಿ ಚಲದಲಿ ತೊಡಚಿಬಿಟ್ಟನು ಮನದ ಭೀತಿಯಲಿ ।೯।

ಎಲ್ಲ ನೃಪರಂತಲ್ಲ ಲಕ್ಷ್ಮೀ
ವಲ್ಲಭನ ಪ್ರತಿಬಿಂಬ ನಿನ್ನಲಿ
ನಿಲ್ಲಬಲ್ಲನೆ ಕಲಿಪುರುಷನತಿ ಬೇಗ ತೆರಳಿದನು
ಸಲ್ಲಲಿತ ಸಾಮ್ರಾಜ್ಯಪದವಿಂ
ದೆಲ್ಲ ನಿನಗಹುದೆಂದು ಧರಣೀ
ವಲ್ಲಭನ ಸತ್ಕರಿಸಿ ಕೊಂಡಾಡಿದನು ಮೈತ್ರೇಯ ।೧೦।

ಎಂದು ಹರಸಿದನವನಿಪಗೆ ಮುದ
ದಿಂದ ಮಂತ್ರಾಕ್ಷತೆಗಳಲಿ ಮುನಿ
ವೃಂದ ಸಂತೋಷಿಸಿತು ನೃಪ ಸಿಂಹಾಸನದೊಳಿರಲು
ಇಂದುವದನೆಯರಾರತಿಯ ನಲ
ವಿಂದಲೆತ್ತಿದರಲ್ಲಿ ಸತಿಯರು
ಸಂದಣಿಸಿ ಪಾಡಿದರು ಶೋಭಾನವನು ಮನವೊಲಿದು ।೧೧।

ಊದಿದುವು ಕಹಳೆಗಳು ಶಂಖವು
ನಾದಿಸಿತು ಭೇರೀ ಮೃದಂಗ ವಿ
ನೋದದಿಂ ರಂಜಿಸಿತು ನಾನಾ ವಾದ್ಯರಭಸದಲಿ
ಮೇದಿನೀಶ್ವರರಾಗ ಮುಯ್ಗಳ
ನೋದಿಸಿದರವನಿಪಗೆ ಸತಿಗಿ
ನ್ನೈದೆತನ ಮಿಗಲೆಂದು ಹರಸಿತು ಮುನಿವಧೂನಿಕರ ।೧೨।

ಅರಸ ಕೇಳು ವಿದರ್ಭಪತಿ ಮುನಿ
ವರರನುಪಚರಿಸಿದನು ಧರಣೀ
ಸುರರಿಗಿತ್ತನು ಗೋ ಹಿರಣ್ಯ ಸುವಸ್ತು ದಾನವನು
ಕರೆಸಿ ಕೊಟ್ಟನು ನೃಪತಿಗಖಿಲಾ
ಭರಣಗಳ ಕರಿ ತುರಗ ರಥವನು
ಪುರಜನರ ಸಂತೈಸಿ ಕಳುಹಿದನಖಿಳ ಬಾಂಧವರ ।೧೩।

ಹರೆದುದೋಲಗವಲ್ಲಿ ಯಾಚಕ
ವರರು ಕೊಂಡಾಡಿದರು ಧರಣೀ
ಶ್ವರರು ಕಳುಹಿಸಿಕೊಂಡು ಹೊಕ್ಕರು ತಮ್ಮ ನಗರಿಗಳ
ಮರುದಿವಸ ಋತುಪರ್ಣ ನಳನೃಪ
ಗೆರಗಿ ಕಳುಹಿಸಿಕೊಂಡಯೋಧ್ಯಾ
ಪುರವ ಹೊಕ್ಕನು ಚೈದ್ಯಭೂಪತಿ ಮರಳಿದನು ಪುರಕೆ ।೧೪।

ಇಂದುಮುಖಿ ದಮಯಂತಿಯೊಡನಾ
ನಂದದಲಿ ನಳನೃಪತಿ ಮಾವನ
ಮಂದಿರದಿ ತಾನೊಂದು ವತ್ಸರವಿದ್ದು ವಿಭವದಲಿ
ಮುಂದೆ ನಮ್ಮಯ ನಿಷಧಪುರಿಗಾ
ವಿಂದು ಗಮಿಸಲು ಬೇಕೆನುತ ತಾ
ನಂದು ಭೀಮನೃಪಾಲನೊಡನಾಲೋಚಿಸಿದ ಹದನ ।೧೫।

ದಂಡು ನಡೆಯಲಿ ನಿಷಧಪುರಿಗಾ
ಭಂಡ ನೃಪ ಪುಷ್ಕರನ ಮಾತೇ
ನಂಡಲೆದು ಫಲವಿಲ್ಲ ಸಾಕಿನ್ನೇಳಿಯೆಂದೆನುತ
ಮಂಡಲಾಧಿಪನೆನಲು ಭೂಪರ
ತಂಡವೆದ್ದುದು ಕೂಡೆ ಭಟರು
ದ್ದಂಡ ಕೈದುವ ಕೊಂಡು ನಡೆದರು ನಳನ ಸನ್ನೆಯಲಿ ।೧೬।

ತುರಗ ಹಲ್ಲಣಿಸಿದುದು ರಥ ಮೋ
ಹರಿಸಿ ತೆರಳಿತು ಸಂಗರಕೆ ಮದ
ಕರಿಗಳಿಟ್ಟಣಿಸಿದುದು ಕಾಲಾಳಿರದೆ ಸಂದಣಿಸೆ
ನೆನೆದುದಗಣಿತ ಸೈನ್ಯಸಾಗರ
ಮೊರೆವವೋಲ್ ಗಂಭೀರಭೇರಿಗ
ಳುರವಣಿಸೆ ಹೊರವಂಟ ನಳನೃಪನರಸ ಕೇಳೆಂದ ।೧೭।

ತುರಗಚಯ ವೆಂಟಣಿಸಿ ಹೂಡಿದ
ವರರಥಕೆ ಬಲವಂದು ಕೈದುವ
ಧರಿಸಿಯೇರಿದನರಸ ಮಂಗಳವಾದ್ಯ ರಭಸದಲಿ
ತೆರಳಿತಲ್ಲಿ ಮಹಾರಥರು ಸಂ
ಗರಕೆ ಮುಂಚುವ ಭಟರ ಗಡಣದಿ
ಧುರಕೆ ನಡೆದರು ಮುಂದೆ ಸಾರುತ ಗೌರುಗಹಳೆಯಲಿ ।೧೮।

ಇದು ಕಣಾ ನಳನಂದು ವನವಾ
ಸದ ಪಯಣವಾದಲ್ಲಿ ಮಕ್ಕಳ
ಪದುಳದಿಂದೇರಿಸಿ ವಿದರ್ಭಕೆ ಕಳುಹಿ ಬಿಟ್ಟ ರಥ
ಗದಗದಿಪ ನವರತ್ನ ನಿಚಯದೊ
ಳುದಿಸಿ ಮೆರೆವ ಸುವರ್ಣ ಕಲಶವ
ಮದನ ನೆಲೆವೀಡೆನಿಸಿ ಮೆರೆದುದು ವರವರೂಥವದು ।೧೯।

ಹೊಳೆವ ಸಿಂಧದ ಸಾಲ ಝಲ್ಲರಿ
ಗಳ ಪತಾಕದ ಚಿತ್ರ ಚಮರಾ
ವಳಿಗಳಿಂದಲಿ ಧಾತುಗುಂದಿದುದಭ್ರತಳ ಮುಸುಕಿ
ಉಲಿವ ಮಂಗಳಪಾಠಕರ ಕಳ
ಕಳಿಕೆ ಮಿಗೆ ಹೆಬ್ಬಲ ಛಡಾಳಿಸೆ
ನೆಲ ಬಿರಿಯಲೈತಂದು ಬಿಟ್ಟುದು ನಿಷಧ ನಗರಿಯಲಿ ।೨೦।

ದಾಳಿಯಿಟ್ಟರು ಹರಿದು ದಿಕ್ಕಿನ
ಮೂಲೆಯವರಂಜಿದರು ಮುಮ್ಮೊನೆ
ಯಾಳು ಕವಿದುದು ಹಿಡಿದರಗ್ಗದ ಸೆರೆಯ ಸೂರೆಗಳ
ಕೇಳಿದನು ಪುಷ್ಕರನು ನಿಷಧನ
ದಾಳಿ ಬರುತಿದೆ ಖತಿಯ ಭರದಲಿ
ಕಾಳಗಕೆ ನಳನೃಪತಿ ಬಂದನೆನುತ್ತ ಮುಳಿದೆದ್ದ ।೨೧।

ಆಗಲಿದಕೇನೀಗ ರಾಜ್ಯವ
ನೀಗಿದಳಲಿನೊಳೊಮ್ಮೆ ಕದನಕೆ
ತಾಗಿದನು ತಪ್ಪೇನು ಬರಹೇಳೆಮ್ಮ ಸೈನಿಕರ
ಈಗಲೀತನ ಕಡಿದು ಸೆರೆಗಳ
ಬೇಗ ಹಿಡಿಯೆಂದೆನುತ ನಿಜಬಲ
ಸಾಗರವ ನೆರಹಿದನು ಕಳುಹಿದ ತನ್ನ ದಳಪತಿಯ ।೨೨।

ಹರಿಗೆ ಖಡ್ಗ ಕಠಾರಿ ತೋಮರ
ಪರಶು ಮುದ್ಗರ ಕುಂತ ಬಲ್ಲೆಹ
ಪರಿಘ ಚಕ್ರ ತ್ರಿಶೂಲ ಕಕ್ಕಡ ಭಿಂಡಿವಾಲ ಚಯ
ಸುರಗಿ ಸಬಳ ಮುಸುಂಡಿ ಮೊದಲಾ
ದುರತರದ ಕೈದುಗಳ ಪಟುಭಟ
ರುರವಣಿಸಿ ತಾಗಿದರು ರಿಪುಮೋಹರವನನುಗೊಳಿಸಿ ।೨೩।

ಹೊಕ್ಕರಾಹವದೊಳಗೆ ಮೊನೆಯ
ಲ್ಲಿಕ್ಕಲಿಸಿ ಬರೆ ಕಂಡು ಮಝುರೇ
ಚುಕ್ಕಿಗಳಿರಾ ಎನುತ ಹೊಯ್ದರು ಬೆರಸಿ ಪಟುಭಟರ
ಇಕ್ಕಿದರು ಸುರಗಿಯಲಿ ಕರಿಗಳ
ತಿಕ್ಕಿ ತಿವಿದರು ತೇರುಗಳ ಮುರಿ
ದಿಕ್ಕಿ ಪರಿಘದೊಳೊರಸಿದರು ಕಾಲಾಳ ಮೂದಲಿಸಿ ।೨೪।

ಇಟ್ಟಣಿಸಿ ಬರೆ ತೇಜಿಗಳ ನೆರೆ
ಕಟ್ಟಿ ಖಂಡಿಸಿ ಭಟರನಾ ಬೆ
ನ್ನಟ್ಟಿ ಕಡಿದರು ಬೆರಸಿ ಬಹ ಬಲು ವೀರನಾಯಕರ
ಹೊಟ್ಟುಗುಟ್ಟಿದರರುಣಜಲ ಸಾ
ಲಿಟ್ಟುದವನಿಯೊಳಮಮ ನೆರೆ ಜಗ
ಜಟ್ಟಿಗಳು ಕಾದಿದರು ರಣದಲಿ ಸುರರು ಬೆರಗಾಗೆ ।೨೫।

ಸಾರಥಿಯನೆಚ್ಚರಿಸಿ ರಥಿಕರು
ತೋರಿದರು ಕೈಗುಣವ ಸರಳಿನ
ಸಾರದಲಿ ರಿಪುಭಟರ ತಲೆಗಳ ತರಿದರಲ್ಲಲ್ಲಿ
ಕಾರಿದರು ರಕುತವನು ತೇರಿನ
ವಾರುವಂಗಳು ಮುಗ್ಗಿದುವು ರಣ
ಧೀರರೆಚ್ಚಾಡಿದರು ಗಾಯದೊಳೊರಲಿತುಭಯಬಲ ।೨೬।

ಕೆಡೆದ ತಲೆಗಳ ಸಿಡಿದ ಹುಬ್ಬಿನ
ಕಡಿದ ತೋಳ್ಗಳ ನೆಗ್ಗಿದೆಲುಗಳ
ಉಡಿದ ತೊಡೆಗಳ ಮಿದುಳ ಖಂಡದ ಹರಿದ ಕರುಳುಗಳ
ಒಡೆದ ನೆತ್ತಿಗಳಿಂದ ರಕುತದ
ಮಡು ಹರಿಯೆ ತರಹರಿಸಲಾರದೆ
ಪಡೆ ಮುರಿದು ಬರತಿರಲು ಕಂಡನು ಖಾತಿಯೊಳು ನಳನು ।೨೭।

ಕರೆದು ಸಾರಥಿಗರುಹಿದನು ಪು
ಷ್ಕರನ ಬಲ ಕೈಮೀರಿ ಬರುತಿರೆ
ತಿರುಹು ತೇಜಿಯನಿತ್ತಲಿವದಿರನೊರಸಿ ಬೆನ್ನಿನಲಿ
ಕರುಳ ತೆಗೆವೆನೆನುತ್ತ ಚಾಪಕೆ
ತಿರುವನೇರಿಸಿ ಸರಳಿನಲಿ ಬೊ
ಬ್ಬಿರಿಯೆ ಧರೆ ತಲ್ಲಣಿಸಿತವನೀಪಾಲ ಕೇಳೆಂದ ।೨೮।

ಮುರಿದ ಬಲ ಸಂವರಿಸಿಕೊಂಡುದು
ಮೊರೆವ ಕಹಳಾರವದ ಸನ್ನೆಯೊ
ಳುರುಬಿತಾ ಬಲದೊಳಗೆ ಬೆರಸಿತು ನಳನ ಪರಿವಾರ
ಅರಸನಾ ಸಮಯದಲಿ ಹೂಡಿದ
ಸರಳ ಕೆನ್ನಿಗೆ ಸೇದಿ ಬಿಡೆ ಕ
ತ್ತರಿಸಿ ಬಿಸುಟುದು ರಿಪುನೃಪರ ಶಿರಗಳನು ಖಂಡಿಸುತ ।೨೯।

ಇಳೆ ಸರಳಮಯವಾಯ್ತು ಕೆಂಡದ
ಮಳೆ ಕರೆದುದೆನೆ ಪುಷ್ಕರನ ಬಲ
ದೊಳಗೆ ಬಿದ್ದುದನೇಕರಿಪುನೃಪ ಸೈನ್ಯಸಾಗರವು
ಮಲೆತವರ ಶಿರಗಳನು ಖಂಡಿಸಿ
ತಲೆಯ ಚೆಂಡಾಡಿದರು ರಥಿಕರು
ಬಲುಗುದುರೆ ಕಾಲಾಳು ನೆಗ್ಗಿತು ನಳನ ಶರಹತಿಗೆ ।೩೦।

ತೆರಹುಗೊಟ್ಟೊಳಹೊಗಿಸಿ ಸದೆದನು
ಬರಸಿಡಿಲು ಬಡಿವಂತೆ ರಿಪುಬಲ
ಮುರಿದು ನಿಂದುದು ಗಾಯವಡೆದರು ವೀರಪಟುಭಟರು
ಹುರಿಯೊಡೆದು ಮೈದೆಗೆದು ಸಲೆ ಕೈ
ಮುರಿಯೆ ಕೈದುವ ಬಿಸುಟು ಪಡೆ ಮೊಗ
ದಿರಹುಲೆಚ್ಚನು ಕೊಚ್ಚಿದನು ಪುಷ್ಕರ ಚತುರ್ಬಲವ ।೩೧।

ಗಾಳಿ ಮುರಿದೌಕಿದಡೆ ಘನಮೇ
ಘಾಳಿ ನಿಲುವುದೆ ನಿಷಧಪತಿಶರ
ಜಾಳದಲಿ ಕಡಿವಡೆದು ಬಿದ್ದರು ರಾಯರಾವುತರು
ಆಳು ಮುರಿದುದು ಕಂಡ ಮುಖದಲಿ
ಹೇಳಲೇನಾನವರ ವಿಧಿಯನು
ಸೋಲದಲಿ ಮನಗುಂದಿ ಹಾಯ್ದರು ಬಿಟ್ಟ ಮಂಡೆಯಲಿ ।೩೨।

ಆರು ಸಾಸಿರ ತೇರುಗಳು ಹದಿ
ನಾರು ಸಾಸಿರ ಕರಿಗಳಿಪ್ಪ
ತ್ತಾರು ಸಾವಿರ ತುರಗ ಕಾಲಾಳೊಂದು ಲಕ್ಷದಲಿ
ಸೇರಿತಂತಕಪುರಿಗೆ ಸರಳಿನ
ಸಾರದಲಿ ರಿಪುಸೇನೆ ಮುರಿದುದು
ಆರು ಬಲ್ಲರು ಮಿಕ್ಕ ಸೇನೆಯನರಸ ಕೇಳೆಂದ ।೩೩।

ಮರನ ಹುತ್ತವನೇರಿದರು ಸಂ
ಗರದಿ ಕೈದುವ ಬಿಸುಟು ಸಲೆ ಮೈ
ಮರೆದು ತೇಜಿಯನಿಳಿದು ರಾವ್ತರು ಕೊರಳ ಸಲಹೆನುತ
ಕರವ ಮುಗಿದರು ಜೋದರರು ಮೈ
ಮರೆದು ಕದನದ ಗಾಯದಲಿ ನೊಂ
ದೊರಲಿ ಬಾಯಲಿ ಬೆರಳನಿಟ್ಟುದು ವೈರಿ ಪಾಯದಳ ।೩೪।

ಮುರಿದು ಬರುತಿದೆ ಜೀಯ ಬಲ ನಿಲ
ಲರಿದು ನಮ್ಮದು ನಳನೃಪಾಲನ
ಶರಹತಿಗೆ ನೆರೆ ಮುಗ್ಗಿ ಕೆಡೆದುದು ತಾರುತಟ್ಟಿನಲಿ
ತರಹರವ ನಾ ಕಾಣೆನೀ ಮೋ
ಹರಕೆ ಗತಿಯೇನೆನಲು ಪುಷ್ಕರ
ಭರದಿ ಕೋಪದೊಳಂದು ಕೆರಸಿದನಾಗ ನಿಜಬಲವ ।೩೫।

ಅರಸ ಕೇಳರಮನೆಗೆ ಬಂದನು
ಉರುತರದ ಕೈದುಗಳ ತರಿಸಿಯೆ
ಧುರವಿಜಯರಿಗೆ ಕರೆಸಿಕೊಟ್ಟನು ಚಾಪಮಾರ್ಗಣವ
ಕರಿತುರಗ ಕಾಲಾಳು ನೆರೆದುದು
ಮೊರೆವ ವಾದ್ಯದ ರಭಸದಲಿ ಸಂ
ಗರಕೆ ಪಯಣವ ಮಾಡುತಿರ್ದನು ನೃಪತಿ ಕೇಳೆಂದ ।೩೬।

ತೆಗೆದು ಹಿಂದಕೆ ನಿಷಧಪತಿ ಕಾ
ಳಗದಿ ಹಿಡಿಸಿದ ಧರ್ಮಗಹಳೆಯ
ವಿಗಡ ಪುಷ್ಕರನಿತ್ತ ಕೋಪಾಗ್ನಿಯಲಿ ಖತಿಮಸಗಿ
ಹಗೆಗೆ ಜಯವಾಯ್ತಿಂದಿನಲಿ ತಾ
ಹೊಗುವೆನಹಿತರ ಮುರಿವೆನೆನೆ ಕೈ
ಮುಗಿದು ಬಿನ್ನೈಸಿದನು ವರಮಂತ್ರೀಶ ಪುಷ್ಕರಗೆ ।೩೭।

ಅರಿಭಯಂಕರ ನೈಷಧನ ಸಂ
ಗರದಿ ಗೆಲುವವರಾರು ದೇವಾ
ಸುರರು ನಿಲಲರಿದರಸ ಮಿಕ್ಕಿನ ನರರ ಪಾಡೇನು
ಮರುಳುತನ ಬೇಡಿನ್ನು ನೃಪನನು
ಕರೆಸಿ ಸಂಧಿಯ ಮಾಡಿ ಜೂಜಿನ
ಮರುವಲಗೆಯಲಿ ಗೆಲುವುದುಚಿತವಿದೆಂದನಾ ಮಂತ್ರಿ ।೩೮।

ವೀರಸೇನನ ತನಯ ನಿಷಧನ
ಸೇರಿಹಳು ಜಯಲಕ್ಷ್ಮೀ ಸೇನಾ
ಭಾರದಲಿ ಋತುಪರ್ಣ ಚೈದ್ಯ ವಿದರ್ಭ ಮೊದಲಾದ
ಭೂರಿನೃಪರೋಲೈಸುತಿದೆ ಸರಿ
ಯಾರು ಸಂಗ್ರಾಮದಲಿ ನಳನಲಿ
ಮೀರಿ ಕೈಮಾಡಿದರೆ ತಪ್ಪದು ಮರಣ ನಿನಗೆಂದ ।೩೯।

ಎನಲು ಕೇಳ್ದಾ ಮಾತಿನಲಿ ಬಂ
ದನು ನಳನ ಕಂಡನು ಮಹೀಪತಿ
ಎನಗೆ ನಿಮ್ಮಲಿ ಕದನವೇತಕೆ ಸಾಕದಂತಿರಲಿ
ಜನಪತಿಗಳೀಕ್ಷಿಸಲಿ ಮರು ಜೂ
ಜಿನಲಿ ನಿಪುಣರು ನಾವು ನಿಮ್ಮಲಿ
ಮನಕೆ ಹರುಷಿತವಾಗಲಾಡುವೆನೆಂದ ನಸುನಗುತ ।೪೦।

ಎಲವೊ ಕೇಳಿನ್ನಾದುದಾಗಲಿ
ಕಲಹಕಂಜುವೆ ನೀನು ಜೂಜಿನ
ಬಳಕೆಯಲಿ ಬಲ್ಲಿದನು ನಮ್ಮನು ಕರೆದ ತಪ್ಪೇನು
ಕಲಹವಾಗಲಿ ಜೂಜದಾಗಲಿ
ಗೆಲುವೆ ನಿನ್ನನು ಕುಟಿಲಹೃದಯದ
ನೆಲೆಯ ಬಲ್ಲೆನು ನಿನಗೆ ಮನವೊಲಿದುದನು ಮಾಡೆಂದ ।೪೧।

ಅರಸ ಕೇಳಾ ಪುಷ್ಕರನು ತ
ನ್ನರಮನೆಗೆ ಕರೆತಂದನಾ ಕಲಿ
ಪುರುಷನಿಂದಲಿ ಮುನ್ನ ಗೆಲಿದಗ್ಗಳಿಕೆಯಲಿ ನೃಪನ
ಪಿರಿದು ತಾ ಗೆಲಬಲ್ಲೆನೆಂದಾ
ಪ್ತರನು ಕರೆಸಿದನೋಲಗದಿ ಕು
ಳ್ಳಿರಲು ತಂದರು ಸಾರಿಗಳನಿರಿಸಿದರು ಸಮ್ಮುಖದಿ ।೪೨।

ನಳನೃಪತಿ ನೀ ಗೆಲಿದೊಡೀ ಭೂ
ಲಲನೆಯನು ತಾ ಬಿಡುವೆ ಸೋತರೆ
ಬಳಿಕ ದಮಯಂತಿಯನು ನನಗೊಪ್ಪಿಸುವುದೆಂದೆನಲು
ಇಳೆಯೊಳಿಹ ಭೂರುಹದ ಹೃದಯದ
ನೆಲೆಯ ಬಲ್ಲಗ್ಗಳಿಕೆಯಲಿ ತಾ
ಗೆಲುವೆನೆಂದೊಪ್ಪಿದನು ಮನದಲಿ ಧೈರ್ಯಪರನಾಗಿ ।೪೩।

ಹೂಡಿದರು ಸಾರಿಗಳ ನೆತ್ತವ
ನಾಡಿದರು ಮನನಲಿದು ಖಾಡಾ
ಖಾಡಿಯಲಿ ದುಗ ಬಾರ ಇತ್ತಿಗವೆಂಬ ರಭಸದಲಿ
ಬೇಡಿದರೆ ಬೀಳುವುದು ದಾಯದ
ರೂಢಿ ಜಳುಪಿಸೆ ಹಳೆವ ದಾಳದ
ರೂಢಿಗಚ್ಚರಿಯಾಗೆ ನಳನೃಪ ಗೆಲಿದು ಬೊಬ್ಬಿರಿದ ।೪೪।

ಖಿನ್ನನಾದನು ಪುಷ್ಕರನು ಹರು
ಷೋನ್ನತಿಯ ಬೀಳ್ಕೊಡಲು ಗುಣ ಸಂ
ಪನ್ನನೇರಿದ ರತ್ನಸಿಂಹಾಸನವ ನಳನೃಪತಿ
ಪನ್ನಗಾರಿಧ್ವಜನ ಕೃಪೆ ನಿನ
ಗಿನ್ನು ಸಿದ್ಧಿಸಲೆಂದು ಮುನಿಜನ
ರುನ್ನತದಿ ಕೊಂಡಾಡಿ ಹರಸಿದರೆಲ್ಲ ಧರಣಿಪನ ।೪೫।

ದೇವದುಂದುಭಿ ಮೊಳಗಿದುದು ದಿವಿ
ಜಾವಳಿಗಳಭ್ರದಲಿ ಸಂಧಿಸಿ
ಹೂವಿನಲಿ ಮಳೆಗರೆದರಾಗ ನೃಪಾಲನಂಗದಲಿ
ಕೋವಿದರು ಸುಜನಾವನೀಶರು
ಸೇವಿಸಲು ಧರೆ ನಲಿಯೆ ನೃಪ ರಾ
ಜೀವಲೋಚನನಂತೆ ಸಿಂಹಾಸನದಿ ರಂಜಿಸಿದ ।೪೬।

ಬಂದು ಕಂಡರು ಪುರಜನರು ನಲ
ವಿಂದ ಕಾಣಿಕೆಗೊಟ್ಟು ಸುರಕುಲ
ವೃಂದ ನಲಿಯಲು ಮಂತ್ರಿಬಾಂಧವರೆಲ್ಲ ಕೈಮುಗಿದು
ವಂದಿಸುತ ಕುಳ್ಳಿರಲು ಸಭೆಯಲಿ
ತಂದರಾರತಿಗಳನು ನೃಪಗರ
ವಿಂದಮುಖಿಯರು ಹರುಷದಿಂದೆತ್ತಿದರು ಮನವೊಲಿದು ।೪೭।

ನಲವು ಹಿಂಗಿದ ಪುಷ್ಕರನ ಮನ
ವೊಲಿದು ಮನ್ನಿಸಿ ಕರೆದು ನಳನೃಪ
ಕಲಿಪುರುಷನಿಂದಾದುದುಪಹತಿ ನಿನ್ನ ತಪ್ಪೇನು
ಹಲವ ಹಂಬಲಿಸದಿರು ನಿನ್ನಲಿ
ಛಲವು ನಮಗಿನಿತಿಲ್ಲ ಮುನ್ನವೊ
ಲಿಳೆಯ ಪಾಲಿಸು ನಮ್ಮ ನೀನೋಲಗಿಸು ಹೋಗೆಂದ ।೪೮।

ಎನಲು ಲಜ್ಜಿತನಾಗಿ ಪುಷ್ಕರ
ವಿನಯದಲಿ ತಾನೆರಗಿ ನಿಮ್ಮಡಿ
ವನಜದೆಡೆಗಪರಾಧಿಯಾದೆನಗಾವ ಗತಿಯಹುದೊ
ಜನಪ ಸಲಹು ಕೃತಘ್ನನನು ಸ
ಜ್ಜನ ಶಿರೋಮಣಿ ನೀನು ಗುಣಹೀ
ನನನು ಕೃಪೆಯಲಿ ರಕ್ಷಿಸೆಂದೆರಗಿದನು ಪದಯುಗಕೆ ।೪೯।

ತನುವ ಸೈಗೆಡೆದಿಹನನೆಬ್ಬಿಸಿ
ಜನಪನೆಂದನು ಪೂರ್ವಫಲ ಸಂ
ಜನಿಸಿತಿದಕಿನ್ನಾರು ಮಾಡುವುದೇನು ಎನುತವನ
ವಿನಯವಚನಕೆ ಮೆಚ್ಚಿ ಕೊಟ್ಟನು
ಕನಕಮಣಿ ಭೂಷಣಗಳನು ಕಾಂ
ಚನವರೂಥವನಿತ್ತು ಮನ್ನಿಸಿ ಕಳುಹಿದನು ಮನೆಗೆ ।೫೦।

ಕರೆಸಿದನು ಬಾಂಧವರ ಮಂತ್ರೀ
ಶ್ವರರ ವಿದ್ವಾಂಸರ ನೃಪಾಲರ
ಕರಣಿಕರನಾಪ್ತರನು ಹಿರಿಯರ ವೀರ ಪಟುಭಟರ
ವರಸಚಿವ ಸಾಮಂತ ಮಲ್ಲರ
ತರುಣಿಯರ ನಟ ಗಾಯಕರ ಸುಜ
ನರಿಗೆ ಮನ್ನಿಸಿ ಕೊಟ್ಟನುಡುಗೊರೆಗಳ ಮಹೀಪಾಲ ।೫೧।

ಕನಕರತ್ನ ಪ್ರಭೆಯ ಸಿಂಹಾ
ಸನದೊಳೊಪ್ಪಿದನುಭಯ ಪಾರ್ಶ್ವದಿ
ವನಿತೆಯರು ಚಿಮ್ಮಿದರು ಸಿತಚಾಮರವನಾ ನೃಪಗೆ
ಜನಪತಿಗಳಿಕ್ಕೆಲದಲಿ ಮಂತ್ರಿ
ಜನ ಪುರೋಹಿತ ಮಲ್ಲ ಗಾಯಕ
ವನಿತೆಯರ ಗಡಣದಲಿ ಮೆರೆದುದು ನೃಪತಿಯಾಸ್ಥಾನ ।೫೨।

ಚಿಂತೆ ಬಲಿದು ವಿದರ್ಭದಲಿ ದಮ
ಯಂತಿ ಕೆಳದಿಯರೊಡನೆ ನುಡಿದಳು
ಪಂತದಲಿ ಪುಷ್ಕರನ ಗೆಲಿದನೊ ಸೋತನೋ ನೃಪತಿ
ಕಂತುಪಿತನ ಕೃಪಾವಲೋಕನ
ವೆಂತಿಹುದೊ ತನಗೆಂಬ ಸಮಯದೊ
ಳಂತರಿಸದೈತಂದರಲ್ಲಿಗೆ ನಳನ ಮಂತ್ರಿಗಳು ।೫೩।

ತಾಯೆ ಬಿನ್ನಹವಿಂದು ನಮ್ಮನು
ರಾಯನಟ್ಟಿದ ನಿಮ್ಮ ಬಳಿಗೆ ನಿ
ರಾಯಸದಿ ಪುಷ್ಕರನ ಗೆಲಿದನು ಸಕಲರಾಜ್ಯವನು
ನ್ಯಾಯದಲಿ ಕೈಕೊಂಡು ನಿಮ್ಮನು
ಪ್ರೀಯದಿಂ ಬರಹೇಳಿದನು ಕಮ
ಲಾಯತಾಂಬಕಿ ಬಿಜಯಮಾಡೆಂದೆರಗಿದರು ಪದಕೆ ।೫೪।

ಕೇಳಿ ಹರುಷಿತೆಯಾದಳವರಿಗೆ
ಪಾಲಿಸಿದಳಾಭರಣ ವಸ್ತುವ
ಲೋಲಲೋಚನೆ ಬಂದು ತಂದೆಗೆ ನಮಿಸಿ ವಿನಯದಲಿ
ನಾಳೆ ಪಯಣವ ಮಾಡಿ ನಿಷಧ ನೃ
ಪಾಲನಲ್ಲಿಗೆ ತನ್ನ ಕಳುಹೆನೆ
ಬಾಲಕಿಯ ನುಡಿಗೇಳಿ ತೆಗೆದಪ್ಪಿದನು ಭೀಮನೃಪ ।೫೫।

ತೆಗೆಸಿದನು ಭಂಡಾರದಲಿ ಬಗೆ
ಬಗೆಯ ವಸ್ತುವ ಸುಭಟರಿಗೆ ಝುಗ
ಝುಗಿಪ ಹೊನ್ನಾಯುಧವ ನವರತ್ನಗಳ ತೊಡಿಗೆಗಳ
ಸುಗುಣಿಯರು ಮೊದಲಾದ ಪರಿವಾ
ರಗಳಿಗಿತ್ತನು ಪಯಣದಲಿ ತೇ
ರುಗಳ ಶೃಂಗರಿಸಿದರು ಬಿರುದಿನ ಸಿಂಧಗಳ ನೆಗಹಿ ।೫೬।

ಬಿಗುಹನೇರಿಸಿ ಹಯಗಳನು ರೆಂ
ಚೆಗಳ ಹಮ್ಮಿದರಾನೆಯಲಿ ಸ
ತ್ತಿಗೆಗಳನು ಪಲ್ಲೈಸಿದರು ಮೇಲೆಸೆವ ಕಳಶದಲಿ
ಸೊಗಸುದೋರುವ ಭಟರ ನೆರೆ ಕೈ
ದುಗಳ ಹೊರಹಿನ ನೃಪರ ಬಳಿಯಲಿ
ನೆಗಹಿ ಬೀಸುವ ಚೌರಿಗಳ ಸಂಭ್ರಮದೊಳೊದಗಿದರು ।೫೭।

ಮಣಿರಥಂಗಳ ನಡುವೆ ಸುಳಿವಂ
ದಣದ ಸಾಲಿನ ಮಧ್ಯದಲಿ ಉರ
ವಣಿಪ ಮತ್ತಗಜಂಗಳಲಿ ಮಾವುತರ ಕಳಕಳದ
ಕುಣಿವ ತೇಜಿಯ ರಾವುತರ ಸಂ
ದಣಿಗಳಲಿ ಚತುರಂಗ ಬಲವಿ
ಟ್ಟಣಿಸಿ ನಡೆದುದು ಸಾಲುಸತ್ತಿಗೆಗಳ ವಿಡಾಯಿಯಲಿ ।೫೮।

ನಾರಿಯರ ಸಂದಣಿಯು ನೆರೆದುದು
ತೇರಿನಲಿ ಕೆಲರಂದಣದಿ ಕೆಲ
ರೇರಿದರು ವಾಜಿಗಳ ಗಜಕಂಧರದ ಗದ್ದುಗೆಯ
ಸೇರಿ ನಡೆದರು ಮುಂದೆ ಘನಗಂ
ಭೀರವಾದ್ಯದ ರಭಸ ತಾನದು
ಭೋರಿಡಲು ಹೊರವಂಟಳಂಗನೆ ಸಕಲ ವಿಭದಲಿ ।೫೯।

ಬಂದಳಾ ದಮಯಂತಿ ದೇವ ಮು
ಕುಂದ ರಕ್ಷಿಸುಯೆನುತ ತನ್ನಯ
ನಂದನರ ಸಹಿತೇರಿದಳು ಮಣಿಮಯ ವರೂಥವನು
ಹಿಂದೆ ಮುಂದಿಕ್ಕೆಲದ ನಾರೀ
ವೃಂದ ನಡೆಯಲು ಮನದ ಹರ್ಷಾ
ನಂದದಲಿ ನಡೆತಂದು ಹೊಕ್ಕಳು ನಿಷಧಪಟ್ಟಣವ ।೬೦।

ನೋಡುತಿರ್ದರು ಪುರಜನರು ನೆಲೆ
ಮಾಡದುಪ್ಪರಿಗೆಯಲಿ ಮಿಗೆ ಕರು
ಮಾಡದೆಡೆಯಲಿ ಸೌಧಗಳ ಜಾಲಂಧ್ರ ಶಿಖರದಲಿ
ನೋಡುವರ ತಾ ನೋಡಿ ನಸುನಗು
ತಾಡುವರ ನೃತ್ಯದಲಿ ಗಾನವ
ಪಾಡುವರ ಕಂಡಲ್ಲಿ ನಲಿಯುತ ಬಂದಳರಮನೆಗೆ ।೬೧।

ಬಾಗಿಲಲಿ ರಥವಿಳಿದು ಬಳಿಕ ಸ
ರಾಗದಿಂದೊಳಹೊಗುತಿರಲು ಪ
ಣ್ಯಾಂಗನೆಯರಾರತಿಯನೆತ್ತಿದರತುಳ ವಿಭವದಲಿ
ಭೋಗಿ ಶಯನನ ಕರುಣ ನಿಮಗುಂ
ಟಾಗಿ ಸುಖಿಯಾಗೆಂದು ಹರಸಿದ
ರಾಗ ಮುನಿನಿಕುರುಂಬವಕ್ಷತೆ ತಳಿದರಂಗನೆಗೆ ।೬೨।

ಹರಕೆಗಳ ಕೈಕೊಳುತ ಸತಿ ಬಂ
ದರಮನೆಯ ಹೊಕ್ಕಳು ನೃಪಾಲನ
ಚರಣಕಮಲಕೆ ನಮಿಸಿ ಪಡೆದಳು ಪತಿಯ ಚಿತ್ತವನು
ಅರಸ ಕೇಳ್ಳೆ ನಿಷಧಪತಿ ನಿಜ
ತರುಣಿ ಸುತರೊಡಗೂಡಿ ಮಂಗಳ
ಕರೆದೊಳೊಪ್ಪಿದ ಸಕಲದೇವಾಮರರು ಕೊಂಡಾಡೆ ।೬೩।

ಪರಮ ಪುಣ್ಯೋದಯನು ಸದ್ಗುಣ
ಭರಿತ ಸತ್ಯಸುಭಾಷಿತನು ಸಂ
ಗರಸುಧೈರ್ಯನು ನಿತ್ಯನಿರ್ಮಲ ನಿಗಮಕೋವಿದನು
ಅರಸುಕುಲ ಪಾವನನು ನಳಭೂ
ವರನು ಸಿಂಹಾಸನದಿ ರಂಜಿಸಿ
ಧರೆಯನಾಳಿದ ವರಪುರದ ಚೆನ್ನಿಗನ ಕರುಣದಲಿ ।೭೪।

ಮುನಿಕುಲಾಂಬುಧಿಚಂದ್ರ ರೋಮಶ
ಮುನಿಪ ವಿಸ್ತರಿಸಿದನು ನಳಭೂ
ಪನ ಚರಿತ್ರೆಯ ಕೇಳಿ ತಲೆದೂಗಿದನು ಯಮಸೂನು
ಮನಕೆ ಹರುಷಾನಂದವಾಯ್ತೆಲೆ
ಮುನಿಪ ನಿಮ್ಮಡಿ ಕರುಣದಲಿ ಇಂ
ದೆನಗೆ ಫಲಿಸಿತು ಪುಣ್ಯವೆಂದೆರಗಿದನು ಚರಣದಲಿ ।೭೫।

ದೇವಮುನಿಗಳು ನೀವು ನಮ್ಮನು
ಪಾವನವ ಮಾಡಿದಿರಿ ನಮಗಿ
ನ್ನಾವುದರಿದುಂಟಿನ್ನು ಪಾರ್ಥನ ಹದನವೇನರಿಯೆ
ಆ ವಿವರವೆನಗಿನ್ನು ತಿಳುಹೆನೆ
ದೇವನಗರಿಯೊಳಿಂದ್ರನಲಿ ಗಾಂ
ಡೀವಿ ಸುಸ್ಥಿರನರಸ ಚಿಂತಿಸಬೇಡ ನೀನೆಂದ ।೭೬।

ಎಲೆ ಯುಧಿಷ್ಠಿರ ಕೇಳು ಲೋಕದ
ಲಲನೆಯರ ಪರಿಯಲ್ಲ ನಾಲ್ವರು
ಚೆಲುವೆಯರು ಗುಣಶೀಲಸಂಪನ್ನೆಯರು ಭುವನದಲಿ
ನಳಿನಮುಖಿ ದಮಯಂತಿ ಸೀತಾ
ಲಲನೆ ದ್ರೌಪದಿ ಚಂದ್ರಮತಿ ಕೋ
ಮಲೆಯರಚ್ಯುತನಚ್ಚು ಮೆಚ್ಚಿನ ರಾಜವನಿತೆಯರು ।೭೭।

ನಿನಗೆ ಪಟ್ಟದ ಮಹಿಳೆ ದ್ರೌಪದಿ
ವನಿತೆಯರ ಸಾಮ್ರಾಜ್ಯಸಂಪದ
ವಿನಿತು ಸತಿಯಿಂದಾಗುವುದು ಕಾಮ್ಯಗಳು ಸಿದ್ಧಿಪುವು
ಜನಪ ಚಿಂತಿಸಬೇಡ ನಾಳಿನ
ದಿನದಿ ಬಹ ನಿನ್ನನುಜನರ್ಜುನ
ಮನದ ಚಿಂತೆಯ ಬೀಳುಕೊಡು ಸುಖಿಯಾಗು ನೀನೆಂದ ।೬೮।

ಹರನು ನಿಮಗೆ ಸಹಾಯ ದೇವಾ
ಸುರರು ನಿಮಗೊಳ್ಳಿದರು ಲಕ್ಷ್ಮೀ
ವರನು ನಿಮಗಿನ್ನಂತರಂಗದ ಪರಮಸಖನಿರಲು
ಮರುಗಲೇಕಿನ್ನಾವುದರಿದೆಲೆ
ಧರಣಿಪತಿ ಸಾಕಿನ್ನು ರಾಜ್ಯದ
ಸಿರಿ ನಿನಗೆ ಬಂದಪುದು ರಿಪುಸಂಹಾರವಹುದೆಂದ ।೬೯।

ಎಂದು ಬುದ್ಧಿಯ ಪೇಳಿ ಮುನಿ ಯಮ
ನಂದನನ ಬೀಳ್ಕೊಂಡು ತಾಪಸ
ವೃಂದ ಸಹಿತಲ್ಲಿಂದ ಹೊರವಂಟನು ನಿಜಾಶ್ರಮಕೆ
ಅಂದು ಯಮಳರು ಧೌಮ್ಯ ದ್ರೌಪದಿ
ಸಂದ ಮುನಿಜನ ಸಹಿತ ಯಮಸುತ
ಬಂದು ಹೊಕ್ಕನು ಪರ್ಣಶಾಲೆಯನಧಿಕ ಹರುಷದಲಿ ।೭೦।

ಈ ಕಥೆಯನಾಲಿಸುವ ಜನರಿಗ
ನೇಕ ಸುಖಸಾಮ್ರಾಜ್ಯಪದವಿಯ
ನಾ ಕಮಲಲೋಚನನು ವರಪುರದರಸ ಪಾಲಿಸುವ
ಲೋಕಪಾವನ ನಳನ ಕಥೆಯ ನಿ
ರಾಕರಿಸಿದವರಧಿಕ ನರಕದ
ಲೋಕವಾಳುವರೆಂದು ರೋಮಶ ನುಡಿದನರಸಂಗೆ ।೭೧।

ಮೇದಿನಿಯೊಳೀ ಪುಣ್ಯಚರಿತೆಯ
ನಾದರಿಸಿ ಬರೆದೋದಿ ಕೇಳುವ
ಸಾಧುಸಜ್ಜನರಾದವರಿಗಹುದಖಿಳ ಕೈವಲ್ಯ
ವೇದಗೋಚರ ಕೃಷ್ಣ ವರಪುರ
ದಾದಿಕೇಶವನಮರ ವಂದಿತ
ನಾದಿನಾರಾಯಣನು ಸಲಹುವನಖಿಳ ಸಜ್ಜನರ ।೭೨।

ಮಂಗಲಂ

# ಅರ್ಥಕೋಶ

ಅಂಟಿನ ಕೋಲು–ಬೇಟೆಯ ವೇಳೆಯಲ್ಲಿ ಮೃಗಗಳನ್ನು ಸೋಹುವ ಕೋಲು
ಅಂಡಲೆ–ಹಿಂಬಾಲಿಸು, ತಿರುಗು
ಅಂತಕಪುರಿ–ಯಮನ ಪಟ್ಟಣ
ಅಂದಣ–ಪಲ್ಲಕ್ಕಿ
ಅಂಬಕ–ಕಣ್ಣು
ಅಂಬರ–ಬಟ್ಟೆ
ಅಕ್ಷಯ–ನಾಶವಿಲ್ಲದವನು
ಅಗಜೆ–ಗಿರಿಜೆ
ಅಗಣಿತ–ಲೆಕ್ಕವಿಲ್ಲದ
ಅಗಳು–ಕಂದಕ
ಅಗ್ಗ (ಳ)–ಶ್ರೇಷ್ಠ
ಅಗ್ಗಳಿಕೆ–ಹಿರಿಮೆ, ದೊಡ್ಡಸ್ತಿಕೆ
ಅಘಾಡ–ಅತ್ಯಧಿಕ
ಅಚ್ಚರಿ–ಆಶ್ಚರ್ಯ
ಅಡಸು–ಮೇಲೆಬೀಳು
ಅಣುಗರು–ಮಕ್ಕಳು
ಅಣೆ–ತಿವಿ, ಸೋಕು
ಅತುಳ–ಅಪಾರ, ಅಸಮಾನ
ಅದ್ರಿ–ಬೆಟ್ಟ
ಅಧರ–ಕೆಳದುಟಿ
ಅನಲ–ಅಗ್ನಿ
ಅನುಜಾತ–ತಮ್ಮ
ಅನುನಯ–ವಿಶ್ವಾಸ
ಅನುಪಮಿತ–ಹೋಲಿಕೆಯಿಲ್ಲದ
ಅನುವಾಗು–ಸಿದ್ಧವಾಗು
ಅನ್ವಯ–ವಂಶ
ಅನಿಬರು–ಅಷ್ಟೂಜನ
ಅನಿಮಿಷಾಧಿಪ–ದೇವತೆಗಳ ಒಡೆಯ (ಇಂದ್ರ)
ಅನೂನ–ಕುಂದಿಲ್ಲದ
ಅನೃತ–ಅಸತ್ಯ
ಅಪಯಶ–ಅಪಕೀರ್ತಿ
ಅಬುಧಿ–ಸಮುದ್ರ
ಅಭಿಧಾನ–ಹೆಸರು
ಅಮರದುಂದುಭಿ–ದೇವದುಂದುಭಿ (ನಗಾರಿ)
ಅರಸಂಚೆ–ರಾಜಹಂಸೆ
ಅರಸು–ಹುಡುಕು
ಅರಿದಾಯಿತು–ತಿಳಿದುದಾಯಿತು, ಅನುಭವಕ್ಕೆ ಬಂತು
ಅರುಣಜಲ–ರಕ್ತ
ಅರುಹು–ಹೇಳು
ಅಲರು–ಹೂವು
ಅಲಸು–ಆಯಾಸ
ಅವಘಡಿಸು–ಹೀಯಾಳಿಸು
ಅವಧರಿಸು–ಲಾಲಿಸು
ಅವನಿ–ಭೂಮಿ

ಅಷ್ಟಭೋಗ–ಎಂಟು ಭೋಗಗಳು (ಮನೆ, ಹಾಸುಗೆ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬೂಲ)
ಅಸು–ಪ್ರಾಣ
ಅಹಿ–ಸರ್ಪ
ಅಹಿಪತಿ–ಆದಿಶೇಷ
ಅಳಲು–ದುಃಖ
ಅಳವಡು–ವಶವಾಗು
ಅಳವೆ–ಶಕ್ಯವೆ, ಸಾಧ್ಯವೆ
ಅಳಿವಿಂಡು–ದುಂಬಿಗಳ ಸಮೂಹ
ಆಕೆವಾಳ–ಶೂರ
ಆಖಂಡಲ–ದೇವೇಂದ್ರ
ಆಚಮನ–ಆತ್ಮಶುದ್ಧಿಗೋಸ್ಕರ ಅಂಗೈಸುಳಿಯಲ್ಲಿ ಅಂಗೈ ಗುಳಿಯಲ್ಲಿ ಶುದ್ಧೋದಕ ವನ್ನು ಹಾಕಿ ಮಂತ್ರ ಪೂರ್ವಕವಾಗಿ ಕುಡಿಯುವುದು.
ಆತ್ಮಜ–ಮಗ
ಆದಿತ್ಯರು–ಅದಿತಿಯ ಮಕ್ಕಳು (ದೇವತೆಗಳು)
ಆನತನಾಗು–ತಲೆಬಾಗು, ನಮಸ್ಕರಿಸು
ಆನನ–ಮುಖ
ಆಪ್ಯಾಯನ–ಹಿತ
ಆಯ–ಸಂಕಲ್ಪ, ಉದ್ದೇಶ
ಆಯತ–ವಿಸ್ತಾರ
ಆಲವಟ್ಟ–ಬೀಸಣಿಗೆ
ಆಳಿ–ಸಮೂಹ
ಆಳ್ವೇರಿ–ಕೋಟೆಯ ಸುತ್ತಲೂ ಓಡಾಡಲು ಮಾಡಿರುವ ದಾರಿ
ಇಕ್ಷು–ಕಬ್ಬು
ಇಟ್ಟಣಿಸು–ಮುತ್ತಿಗೆಹಾಕು, ದಟ್ಟವಾಗು, ಗುಂಪುಕೂಡು
ಇತ್ತೆರ–ಎರಡೂ ಕಡೆಯ
ಇನಕುಲ–ಸೂರ್ಯವಂಶ
ಇನಿಯ–ಪ್ರಿಯತಮ
ಇಭ–ಆನೆ
ಇಳೆ–ಭೂಮಿ
ಇಳೆಯಮರ–ಬ್ರಾಹ್ಮಣ
ಈಂಟು–ಕುಡಿ, ಹೀರು
ಉಗ್ಗಡ–ಉತ್ಕಟ, ಅತಿಶಯ, ಬಲುಜೋರು
ಉಗ್ಘಡಿಸು–ಉದ್ಘೋಷಿಸು, ಹೊಗಳು
ಉಗಿ–ಹೊರತೆಗೆ, ಕೀಳು
ಉಗು–ಚಿಮ್ಮು
ಉತ್ತರಿಸು–ದಾಟು
ಉನ್ನತಿಕೆ–ಹಿರಿಮೆ
ಉಪಟಳ–ಹಿಂಸೆ, ತೊಂದರೆ
ಉಪಲ–ಕಲ್ಲು
ಉಪಹತಿ–ನಾಶ, ಕಾಟ, ಪೆಟ್ಟು, ತೊಂದರೆ
ಉಪ್ಪರಿಗೆ–ಮಹಡಿ
ಉಪ್ಪವಡಿಸು–ಮೇಲೆ ಏಳು
ಉಮ್ಮಳ–ದುಃಖ, ವ್ಯಥೆ

ಉರಗ–ಸರ್ಪ
ಉರುತರ–ಶ್ರೇಷ್ಠ
ಉರುಬು–ರಭಸ, ಆರ್ಭಟ
ಉರುಭರ–ಯೌವನ
ಉರ್ವಿ–ಭೂಮಿ
ಉಲುಪೆ–ಮಂಗಳ ಪ್ರಸಂಗಗಳಲ್ಲಿ ಉಚಿತವಾಗಿ ಕೊಡುವ ಭತ್ಯೆ
ಉಳಿ–ಬಿಡು
ಊಳಿಗ–ಸೇವೆ
ಎಚ್–(ಇಸುಧಾತು) ಬಾಣ ಪ್ರಯೋಗ ಮಾಡು
ಎಡರು–ತೊಡಕಿನಲ್ಲಿ ಸಿಕ್ಕಿಹಾಕು
ಎಣೆ–ಸಮಾನ
ಎಣ್ದೆಸೆ–ಎಂಟುದಿಕ್ಕು
ಎರಗು–ನಮಸ್ಕರಿಸು
ಎರೆವಾತ–ಕೊಡುವವನು
ಎಸೆ–ಶೋಭಿಸು
ಏಕಾವಳಿ–ಒಂಟೆಳೆಸರ
ಏಗು–ಏನು ಪ್ರಯೋಜನವಾಗು
ಏಣಲೋಚನೆ–ಜಿಂಕೆ ಕಣ್ಣವಳು
ಐದೆತನ–ಮುತ್ತೈದೆತನ
ಐಯ್ದು–ಸೇರು, ಮುಟ್ಟು
ಒಗ್ಗು–ಸಾಲು, ರಾಶಿ, ಗುಂಪು
ಒರಲು–ಕೂಗು
ಒರೆದೊರೆದು–ಪರೀಕ್ಷಿಸಿ
ಒಸೆ–ಪ್ರೀತಿ
ಒಸಗೆ–ಶುಭ, ಸಂತೋಷ
ಒಳಗುಮಾಡು–ವಶವರ್ತಿಯನ್ನಾಗಿಸು
ಓರಣ–ಪಂಕ್ತಿ
ಓಲಗ–ರಾಜಸಭೆ
ಓಲಯಿಸು–ಮೆಚ್ಚು, ಸೇವಿಸು
ಓಸರಿಸು–ಅರುಗಾಗು, ಓರೆಯಾಗು
ಔಘ–ಸಮೂಹ
ಕಂಟಕ–ಮುಳ್ಳು
ಕಂಜಜನಯ್ಯ–ಬ್ರಹ್ಮನ ತಂದೆ (ವಿಷ್ಣು)
ಕಂಧರ–ಕೊರಳು
ಕಂಬುಕಂಠ–ಶಂಖದಂತಹ ಕೊರಳು
ಕಕ್ಕಡ–ಒಂದು ಆಯುಧ ವಿಶೇಷ
ಕಕ್ಷಪಾಳ–ಕಂಕುಳ ಚೀಲ
ಕಟವಾಯಿ–ದವಡೆ
ಕಣ್ಣೆವೆ–ಕಣ್ಣರೆಪ್ಪೆ
ಕದಂಬ–ಈಚಲ
ಕದಪು–ಕೆನ್ನೆ
ಕದಳಿ–ಬಾಳೆ
ಕನಲು–ಕೋಪ
ಕಪಿತ್ಥ–ಬೇಲ
ಕಮಠ–ಆಮೆ
ಕಮಲಸಂಭವ–ಬ್ರಹ್ಮ
ಕರಗ–ಕಲಶ
ಕರುಣಾಯತನ–ಕಾರ್ಯಕೌಶಲ್ಯ
ಕರವಾಳ–ಕತ್ತಿ
ಕರಿಗಮನ–ಇಂದ್ರ
ಕರಿಮುಖ–ಗಣೇಶ
ಕಲಾಧಿಪ–ಸೂರ್ಯ
ಕವಳ–ವೀಳ್ಯ
ಕವಾಟ–ಬಾಗಿಲ ಕದ
ಕಳಕಳಿಕೆ–ಕಲಕಲಶಬ್ದ
ಕಾಂಚನ–ಚಿನ್ನ

ಕಾಕಬಳಸು–ಕೆಟ್ಟದಾಗಿ ಆಲೋಚಿಸು
ಕಾತರಿಸು–ಕಳವಳಪಡು
ಕಾಪಥ–ತಪ್ಪುದಾರಿ
ಕಾಪುರುಷ–ಹೀನಮನುಷ್ಯ
ಕಾಮ್ಯ–ಇಷ್ಟಾರ್ಥ
ಕುಂತ–ಈಟಿ, ಭರ್ಜಿ
ಕುಂದಕುಟ್ಮಲ–ಮಲ್ಲಿಗೆ ಮೊಗ್ಗು
ಕುಟಜ–ಕೊಡಸಿಗೆ, ಬೆಟ್ಟಮಲ್ಲಿಗೆ
ಕುಟಿಲ–ವಂಚನೆ
ಕುಡಿತೆಗಂಗಳು–ಬೊಗಸೆ ಕಣ್ಣುಗಳು
ಕುಣಿಕೆ–ಗಂಟು, ತೊಡಕು
ಕುಮತಿ–ಕೆಟ್ಟಬುದ್ಧಿ
ಕುರವಕ–ಗೋರಂಟಿ, ಮದರಂಗಿ ಗಿಡ
ಕುರುಳು–ತಲೆಗೂದಲು
ಕುಸುರಿದರಿ–ಸಣ್ಣ ಸಣ್ಣದಾಗಿ ಕತ್ತರಿಸು
ಕೂರ್–ಹರಿತ
ಕೂಲ–ತೀರ, ದಡ
ಕೃಪಣತನ–ದಾರಿದ್ರ್ಯ, ಬಡತನ, ಜುಗ್ಗತನ
ಕೆಲ–ಪಕ್ಕ
ಕೇತಕಿ–ತಾಳೆಯ ಗಿಡ
ಕೇಳಮೇಳ–ಸರಸ ಸಲ್ಲಾಪ
ಕೈಕಂಬಿ–ಕೈಕೋಲು
ಕೈದಳಿಸು–ವಶಪಡಿಸು
ಕೈದು–ಆಯುಧ
ಕೈನೆಗಹು–ಕೈಮೇಲೆತ್ತು
ಕೈವಲ್ಯ–ಮೋಕ್ಷ
ಕೈವಾರ–ಹೊಗಳಿಕೆ
ಕೊಂಚಗಾರ–ಸಣ್ಣಮನುಷ್ಯ

ಕೊಳುಗುಳ–ಯುದ್ಧ
ಕೋದಂಡ ದೀಕ್ಷಾಚಾರ್ಯ–ರಾಮ
ಕೋಳುಹೋಗು–ಹಾಳಾಗು
ಕೌಂತೇಯ–ಕುಂತೀದೇವಿಯ ಮಗ
ಕ್ರತು–ಯಜ್ಞ, ಯಾಗ
ಕ್ರಮುಕ–ಅಡಕೆ
ಕ್ಷೋಣಿಪತಿ–ಪೃಥ್ವೀಪತಿ
ಘಳಿಲನೆ–ಶೀಘ್ರವಾಗಿ, ತತ್‌ಕ್ಷಣವೆ
ಖಂಡಪರಶು–ಶಿವ, ರುದ್ರ
ಖಗಪತಿ–ಗರುಡ
ಖತಿ–ಕೋಪ
ಖಯಖೋಡಿಯಿಲ್ಲದೆ–ಯಾವ ದಾಕ್ಷಿಣ್ಯವನ್ನೂ ಇಟ್ಟುಕೊಳ್ಳದೆ
ಖಾಡಾಖಾಡಿ–ಆವೇಶ
ಖಾತ–ಅಗೆದ, ತೋಡಿದ
ಖಿನ್ನ–ನೊಂದುಕೊಂಡ
ಗಂಧವಟ್ಟಿಗೆ–ಗಂಧದ ಮರದ ಕದ ಅಥವಾ ಅಡಪಟ್ಟಿ
ಗಗನಮಣಿ–ಸೂರ್ಯ
ಗಡಣ–ಸಮೂಹ
ಗದಗದಿಪ–ಹೊಳೆಹೊಳೆವ
ಗರಳ–ವಿಷ
ಗಾಂಗೇಯ–ಭೀಷ್ಮ
ಗಾರುಗೆಡಿಸು–ಗಾಸಿಗೊಳಿಸು, ಹಿಂಸಿಸು
ಗಾವಳಿ–ಸದ್ದು,ಗದ್ದಲ, ಶೀವಿ, ಗತ್ತು
ಗೀರ್ವಾಣಿ–ಸರಸ್ವತಿ
ಗುಡಿ–ಬಾವುಟ
ಗುಪಿತ–ಗುಪ್ತ

ಗುಹ್ಯಕ–ಕುಬೇರನ ಕಡೆಯ ದೇವತೆ
ಗೌರುಗಹಳೆ–ಗಟ್ಟಿಧ್ವನಿಗೈವ ಕಹಳೆ
ಘಟ–ಸಮೂಹ
ಚಂದನ–ಶ್ರೀಗಂಧ
ಚಕ್ರಾಧಾರ–ಜಗತ್ತಿಗೆ ಆಧಾರನಾದವನು
ಚಡಾಳಿಸು–ಹೊಳೆ, ಪ್ರಜ್ವಲಿಸು, ಜೋಡಿಸು, ಅಧಿಕನಾಗು
ಚತುರ್ಥರು–ಶೂದ್ರರು
ಚತುರೋಪಾಯ–ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ಉಪಾಯಗಳು

ಚಯ–ಸಮೂಹ
ಚರ–ಗೂಢಚಾರ
ಚಳೆ–ಚಿಮುಕಿಸು
ಚಾಪ–ಬಿಲ್ಲು
ಚಾರಿ–ಪಗಡೆಕಾಯಿ
ಚಾರು–ಉತ್ತಮ, ಮನೋಹರ
ಚಿತ್ತವಧಾನ–ಲಾಲಿಸು
ಚಿನ್ಮಯ–ಜ್ಞಾನಮಯನಾದ
ಚೌರಿ–ಚಾಮರ
ಛಡಾಳಿಸು–ಅಧಿಕವಾಗು
ಜಂಬು–ನೇರಿಳೆ
ಜಂಬಾಇರ–ದೇವೇಂದ್ರ
ಜಲಜಸಖ–ತಾವರೆಯ ಮಿತ್ರ (ಸೂರ್ಯ)
ಜಲ್ಲರಿ–ಜಾಲರಿ, ಜರಡಿ
ಜವ–ಯಮ
ಜಾನುಜಂಘೆ–ಮೊಣಕಾಲು ಮತ್ತು ಪಾದದ ಗಂಟು
ಜಾಲ–ಮೊತ್ತ
ಜಾಲಂಧ್ರ–ಬಲೆಯಂತೆ ಕಿಂಡಿಗಳನ್ನು ಒಳಗೊಂಡಿರುವ ಕಿಟಕಿ
ಜಿತಸಂಗ್ರಾಮ–ಯುದ್ಧದಲಿ ಗೆದ್ದವನು
ಜಿಹ್ವೆ–ನಾಲಗೆ
ಜೋಕೆ–ಅಂದ
ಜೋಡಣೆ–ಸೇರಿಕೆ
ಝುಲ್ಲರಿ–ಕುಚ್ಚು, ಗೊಂಡೆ
ಠಾವು–ಸ್ಥಳ
ಡೊಂಬಿ–ಗುಂಪು
ಢಾಳ–ಉಜ್ವಲ, ಕಾಂತಿಯುತ
ತಕ್ಕೋಲ–ಸುಗಂಧದ ಚೆಕ್ಕೆಯುಳ್ಳ ಒಂದು ಜಾತಿಯ ಮರ
ತಗೆಬಗೆ–ಹಿಂಸೆ, ಕಷ್ಟ, ಶ್ರಮ
ತಪನತನಯ–ಸುಗ್ರೀವ
ತಮ–ಕತ್ತಲು
ತಮಾಲ–ಹೊಂಗೆ
ತರಹರ–ನಿಲುಗಡೆ
ತರುಬು–ತಡೆದು ನಿಲ್ಲಿಸುವುದು
ತಲೆಗುತ್ತು–ತಲೆತಗ್ಗಿಸು
ತವಕ–ಆತುರ, ಕಾತರ
ತಳಿಗೆ–ತಟ್ಟೆ
ತಳಿದ–ತುಂಬಿದ
ತಳಿರು–ಚಿಗುರು
ತಕ್ಕಿಸು(ತಕ್ಕೈಸು) ಆಲಿಂಗಿಸು
ತಳುವು–ತಡಮಾಡು
ತಳೋದರಿ–ಸ್ತ್ರೀ
ತಾಪಸ–ತಪಸ್ವೀ, ಋಷಿ

ತಾಮರಸದಳ ನಯನ–ತಾವರೆಯ ಕಣ್ಣವನು
ತಾರುತಟ್ಟು–ಚೆಲ್ಲಾಪಿಲ್ಲಿ
ತಾಲ–ತಾಳೆ
ತಾಳಿಗೆ–ಅಂಗಳು, ಗಂಟಲಿನ ಮೇಲುಭಾಗ
ತಿಮಿರ–ಕತ್ತಲು
ತುಡುಕು–ತಾಗು, ಮುಟ್ಟು
ತುರುಬು–ಮುಡಿ
ತೂಪಿರಿ–ಉಫ್ ಉಫ್ ಎಂದು ಊದಿ ದೃಷ್ಟಿದೋಷ ತೆಗೆಯುವುದು
ತೂಳು–ಮುನ್ನುಗ್ಗು
ತೆತ್ತಿಗ–ಸಾಲ ಕೊಟ್ಟವನು
ತೆತ್ತಿಸು–ಮುಚ್ಚು
ತೆನೆ–ಕೋಟೆಯ ತುದಿ
ತೆರಹು–ಎಡೆ, ಅವಕಾಶ
ತೆರು–ಕೊಡು, ಸಲ್ಲಿಸು
ತೇಜಿ–ಕುದುರೆ
ತೊಡಚಿ ಬಿಡು–ಗಂಟುಬೀಳು
ತೊಡರು–ಆಭರಣ
ತೋಮರ–ಒಂದು ಆಯುಧ ವಿಶೇಷ (ಈಟಿ)
ತೋಯಜಾಪ್ತ–ಸೂರ್ಯ
ತೋರಹತ್ತ–ಸ್ಥೂಲವಾದ (ದಪ್ಪನಾದ) ಹಸ್ತ
ತೋರ್ಕೆ–ಕಾಣ್ಕೆ
ತ್ರಾಣ–ಶಕ್ತಿ
ತ್ರೈಗುಣ–ಸತ್ತ್ವ, ರಜಸ್, ತಮಸ್ಸು ಎಂಬ ಮೂರು ಗುಣಗಳು
ದಂಟಿಸು–ದಂಡಿಸು, ಶಿಕ್ಷಿಸು
ದಂಡಧರ–ಯಮ
ದಂಡಿಗೆ–ಮೇನೆ, ಪಲ್ಲಕ್ಕಿ
ದಳ್ಳುರಿ–ದಟ್ಟವಾದ ಉರಿ, ಮಹಾಜ್ವಾಲೆ, ಕಾಳ್ಗಿಚ್ಚು
ದುಕೂಲ–ಮೇಲು ಹೊದಿಕೆ, ಧಾವಣಿ
ಧನದ–ಕುಬೇರ
ಧನಾಢ್ಯ–ಶ್ರೀಮಂತ
ದಾರವಟ್ಟ–ಹೆಬ್ಬಾಗಿಲು, ಅಗಸೆ
ದಿಗಂತ–ಭೂಮಿ ಆಕಾಶ ಕೂಡಿದ ಹಾಗೆ ಕಾಣುವ ಜಾಗ, ದಿಕ್ತಟ
ದಿನೇಶ ಶತ ಸಂಕಾಶ–ನೂರು ಸೂರ್ಯ ಪ್ರಕಾಶವುಳ್ಳವ
ದಿವ–ಸ್ವರ್ಗ
ದುರ್ಘಟ–ಆಪತ್ತು
ದುರಿತ–ಪಾಪ
ದೃಗುಯುಗಳ–ಎರಡು ಕಣ್ಣುಗಳು
ದೇಸಿ–ಚೆಲುವು
ದೋರ್ಬಲ–ಬಾಹುಬಲ
ಧನಪ–ಕುಬೇರ
ಧಾತು–ಶಕ್ತಿ
ಧಾತ್ರಿಜಾಂತಕ–ನರಕಾಸುರನನ್ನು ಕೊಂದವನು (ವಿಷ್ಣು)
ಧಾರಿಣಿ–ಭೂಮಿ, ರಾಜ್ಯ
ದೈವಜ್ಞ–ಜ್ಯೋತಿಷಿ
ದ್ಯುಮಣಿ–ಸೂರ್ಯ
ನಕ್ರ–ಮೊಸಳೆ

ನಖ–ಉಗುರು
ನಭ–ಆಕಾಶ
ನಭೋನಿನದ–ಆಕಾಶವಾಣಿ, ಅಶರೀರವಾಣಿ
ನಯನ–ಕಣ್ಣು
ನರ–ಕಿರೀಟಿ, ಅರ್ಜುನ
ನರೆದಲೆಗ–ರಾಗಿ
ನವನೀತ–ಬೆಣ್ಣೆ
ನಸಿದ–ಕ್ಷೀಣಿಸಿದ
ನಳಿನಸಖ–ತಾವರೆಯ ಮಿತ್ರ (ಸೂರ್ಯ)
ನಾಕನಿಳಯರು–ಸ್ವರ್ಗವಾಸಿಗಳು (ದೇವತೆಗಳು)
ನಾಗನಗರಿ–ಹಸ್ತಿನಾವತಿ
ನಾಸಿಕ–ಮೂಗು
ನಿಕಾಯ–ಸಮೂಹ
ನಿಕುರುಂಬ–ಸಮೂಹ
ನಿಗಮನುತ–ವೇದಗಳಿಂದ ಹೊಗಳಲ್ಪಟ್ಟ
ನಿಚಯ–ಸಮೂಹ
ನಿನದ (ನಿನಾದ)–ಶಬ್ದ
ನಿಬ್ಬರ–ನಿರ್ಭರ, ರಭಸ, ತೀವ್ರ
ನಿರ್ದಾಯ–ಸಂಪೂರ್ಣ, ಶಾಶ್ವತ
ನಿರಾಮಯ–ದುಃಖವಿಲ್ಲದವ
ನಿರ್ವಾಹ–ಸರಾಗ
ನಿರಿಗುರುಳು–ಗುಂಗುರು ಕೂದಲು
ನಿರುತ–ಯಾವಾಗಲೂ
ನಿವಹ–ಸಮೂಹ
ನಿಸ್ಸಾಳ–ಒಂದು ಬಗೆಯ ಚರ್ಮವಾದ್ಯ
ನೂಪುರ–ಕಾಲಂದುಗೆ, ಕಡಗ, ಕಾಲ್ಗೆಜ್ಜೆ
ನೆಗಳು–ಮಾಡು, ಖ್ಯಾತನಾಗು, ಹೊಳೆ
ನೆಗಹು–ಮೇಲೆತ್ತು
ನೆಗ್ಗು–ಅಶವಾಗು, ಕುಸಿ
ನೆತ್ತ–ಜೂಜು, ಪಗಡೆ ಆಟ
ನೆರವಿ–ಸಂದಣಿ, ಸಮೂಹ
ನೊರಜು–ಸೊಳ್ಳೆ, ಗುಂಗುರ
ನೋಂತೆನೊ–ವ್ರತಮಾಡಿದೆನೊ
ಪಂಟಿಸು–ಪ್ರತಿಭಟಿಸು, ವಿರೋಧಿಸು
ಪತಂಗ–ಸೂರ್ಯ
ಪತಿಕರಿಸು–ಅನುಗ್ರಹಿಸು, ಹೊಗಳು, ಗೌರವಿಸು
ಪತಿತ–ನೀಚ, ಪಾಪಿ
ಪಥ–ಹಾದಿ
ಪದ–ಕಾಲು, ಹೆಜ್ಜೆ, ಪಾದ
ಪನಸ–ಹಲಸು
ಪನ್ನಗವೇಣಿ–ಹಾವಿನಂತಹ ಹೆರಳುಳ್ಳವಳು
ಪಯಬಿಂದು–ಹಾಲಹನಿ
ಪರಶು–ಕೊಡಲಿ
ಪರಿಘ–ಒಂದು ಆಯುಧ ವಿಶೇಷ
ಪರಿಣತರು–ಜಾಣರು
ಪರಿತಾಪ–ದುಃಖ
ಪರಿತೋಷ–ಅತ್ಯಂತ ಆನಂದ, ಸಂತೋಷ
ಪರುಟವ–ವಿಸ್ತಾರ
ಪರುಠವಣೆ–ವಿಶೇಷ
ಪಲ್ಲವ–ಚಿಗುರು
ಪಲ್ಲೈಸು–ತುಂಬು, ಕೋರೈಸು, ಸಿಕ್ಕು

ಪವನ–ಗಾಳಿ
ಪಾಕ ಶಾಸನ–ಪಾಕ ಎಂಬ ರಾಕ್ಷಸನನ್ನು ನಿಯಂತ್ರಿಸಿದವನು (ಇಂದ್ರ)
ಪಾತಕ–ಹೊಗಳು ಭಟ್ಟ
ಪಾಣಿ–ಕೈ
ಪಾಯವಧಾನ–ಪಾದ ಬೆಳೆಸಿ
ಪಾಯ್ದಳ–ಕಾಲಾಳ ಸೇನೆ
ಪಾವಕ–ಅಗ್ನಿ
ಪಾಸಟಿ–ಸರಿಸಾಟಿ
ಪಿಕ–ಕೋಗಿಲೆ
ಪಿಸುಣ–ಹೊಟ್ಟೆಕಿಚ್ಚಿನವ, ಚಾಡಿಕೋರ
ಪುತ್ತಳಿ–ಬೊಂಬೆ
ಪುರಂದರ–ಇಂದ್ರ
ಪುರಹರಸಂಗ–ಶಿವನ ಸ್ನೇಹಿತ (ವಿಷ್ಣು)
ಪುರುಹೂತ–ಇಂದ್ರ
ಪುಳಕಜಲ–ರೋಮಾಂಚನವೆಂಬ ನೀರು
ಪುಳಿಂದ–ಬೇಡ
ಪೂಗಣೆ–ಹೂಬಾಣ
ಪೆರೆನೊಸಲು–ಚಂದ್ರನಂತಹ ಹಣೆ
ಪೊಂಬೊಗರ–ಹೊನ್ನಕಾಂತಿ
ಪ್ರಚ್ಛನ್ನವೇಷ–ಮಾರುವೇಷ (ಮರೆಮಾಚಿದ ವೇಷ)
ಪ್ರಣುತಿ–ವಂದಿಸು
ಪ್ರಾಕಾರ–ಕೋಟೆ, ಗೋಡೆ
ಪ್ರಾಕೃತರು–ಅನಾಗರಿಕರು, ಹಳ್ಳಿಗರು
ಫಾಲಲೋಚನ–ಹಣೆಗಣ್ಣ (ಶಿವ)
ಬಕುಳ–ನಾಗಕೇಸರ
ಬಡಬ–ಸಮುದ್ರದ ಮಧ್ಯದಲ್ಲಿ ಉತ್ಪನ್ನವಾಗುವ ಬೆಂಕಿ
ಬಣಜಿಗರು–ವ್ಯಾಪಾರಿಗಳು
ಬಣಗು–ಕ್ಷುದ್ರ, ಅಲ್ಪ, ಸಾಮಾನ್ಯ
ಬಯಲಾಡಂಬರ–ಒಣಹೆಮ್ಮೆ
ಬರವು–ಆಗಮನ
ಬಲಗೊಳ್ಳು–ಪ್ರದಕ್ಷಿಣೆ ಬರು
ಬಲಿದ–ದೊಡ್ಡದಾದ, ಹೆಚ್ಚಾದ
ಬಲ್ಲಿದ–ಸಮರ್ಥ
ಬಲ್ಲೆಹ–ಭರ್ಜಿ, ಭಲ್ಲೆಹ
ಬವಣೆ–ತೊಂದರೆ, ದಿಗ್ಭ್ರಮೆ, ಕಳವಳ
ಬವರ–ಯುದ್ಧ
ಬಳಿವಿಡಿ–ಹಿಂಬಾಲಿಸು
ಬಾಣಸು–ಅಡುಗೆ
ಬಾದರಾಯಣ–ವ್ಯಾಸ
ಬಿಂಡಿವಾಲ–ಒಂದು ಆಯುಧ ವಿಶೇಷ
ಬಿನ್ನಪ–ವಿಜ್ಞಾಪನೆ
ಬಿರುದಾಯಕ–ಬಿರುದು ಪಡೆಯಲು ಅರ್ಹತೆ ಉಳ್ಳವನು
ಬಿರುನುಡಿ–ಬಿರುಸು ಮಾತು
ಬಿಸರುಹಾಕ್ಷಿ–ತಾವರೆ ಕಣ್ಣುಳ್ಳವಳು
ಬೀಯ–ವ್ಯಯ, ನಷ್ಟ, ಖರ್ಚುಮಾಡು
ಬೆಸಗೊಳ್–ಕೇಳು
ಬೇಹಾರಿ–ವ್ಯಾಪಾರಿ
ಬೊಂತೆ–ಕವುದಿ, ಕೀಳುವಸ್ತು
ಬೋದಿಗೆ–ಕಂಬ ಮತ್ತು ಅಡ್ಡತೊಲೆಯ ಮಧ್ಯದ ತುಂಡುಮರ ಅಥವಾ ಕಲ್ಲು

ಭಣತಿ–ಮಾತಿನ ವೈಖರಿ
ಭರ್ಗ–ಈಶ್ವರ
ಭರಣಿ–ಕರಡಿಗೆ
ಭವದೂರ–ಹುಟ್ಟುಸಾವಿಲ್ಲದವನು
ಭುಂಜಿಸು–ತಿನ್ನು
ಭಾರಕರ್ತ–ಹೊಣೆಹೊತ್ತವ
ಭಾವಜಾರಿಪ್ರಿಯ–ಈಶ್ವರನ ಗೆಳೆಯ (ವಿಷ್ಣು)
ಭಾಳ–ಹಣೆ
ಭಿತ್ತಿ–ಗೋಡೆ
ಬಿಸುಸುಯ್–ಬಿಸಿಯುಸಿರುಬಿಡು
ಭುಜಂಗ–ನಾಗ, ಸರ್ಪ
ಭುಲ್ಲವಿಸು–ಸಂತೋಷದಿಂದ ಉಬ್ಬು
ಭೂತದಯೆ–ಪ್ರಾಣಿದಯೆ
ಭೂರಿ–ವಿಶೇಷ
ಭೂರುಹ–ಮರ
ಮಕರಕೇತನ–ಮೀನಧ್ವಜ, ಮನ್ಮಥ
ಮಕುಟವರ್ಧನ–ಕಿರೀಟಧಾರಿ (ರಾಜ)
ಮಖ–ಯಜ್ಞ, ಯಾಗ
ಮಟ್ಟಿ–ಗೋಪಿಚಂದನ ನಾಮ
ಮಡ–ಹೆಜ್ಜೆಯ ಹರಡು, ಹಿಮ್ಮಡಿ
ಮಡುಹು–ಸಾಯಿಸು
ಮಣೆಯಗಾರ–ಜವಾಬ್ದಾರ
ಮಂದರಾದ್ರಿಧರ–ಮಂದರಗಿರಿಧಾರಿ
ಮತಿವಿಕಳ–ಬುದ್ಧಿ ಕಳೆದುಕೊಂಡವ, ಹುಚ್ಚ
ಮನ್ನಿಸು–ಗೌರವಿಸು
ಮನೆವಾರ್ತೆ–ಮನೆಕೆಲಸ
ಮರುಳ–ಹುಚ್ಚ, ದಡ್ಡ
ಮಲಿನ–ಕೊಳಕು
ಮಲೆತವರು–ಉದ್ಧಟರು, ಸೊಕ್ಕಿನವರು
ಮಸೆ–ತೀವ್ರಗೊಳಿಸು
ಮಾಣಿಸು–ತಡೆ, ಪರಿಹರಿಸು
ಮಾರ್ಗಣ–ಬಾಣ
ಮಾರುತನ ಸಖ–ಬೆಂಕಿ
ಮಿಗೆ–ಹೆಚ್ಚು, ವಿಶೇಷ
ಮಿಡುಕು–ಸಂಕಟಪಡು
ಮಿಸುನಿ–ಚಿನ್ನ
ಮುಂಚು–ಮುಂದಾಗು
ಮುಂತಳರ್–ಮುಂದೆ ನಡೆ
ಮುಗ್ಗು–ನಾಶ
ಮುದ–ಹರ್ಷ, ಸಂತೋಷ
ಮುದ್ಗರ–ಒಂದು ಆಯುಧ ವಿಶೇಷ (ಗದೆ)
ಮುನ್ನ–ಹಿಂದೆ
ಮುಮ್ಮೊನೆ–ಸೇನೆಯ ಮುಂಭಾಗ
ಮುಯಿ–ಕಾಣಿಕೆ
ಮುರಿ–ಹಿಮ್ಮೆಟ್ಟು
ಮುಸುಂಡಿ–ಒಂದು ಆಯುಧ ವಿಶೇಷ
ಮೇದಿನಿ–ಭೂಮಿ
ಮೇಲುದು–ಮೇಲುಮುಸುಕು, ಉತ್ತರೀಯ, ಧಾವಣಿ
ಮೊನೆಯಲಗು– ಹರಿತವಾದ ಬಾಣ
ಮೊಳಗು–ಶಬ್ದಮಾಡು
ಮೋಹರ–ಸೇನೆ, ಗುಂಪು, ಸಜ್ಜು
ಮೌಳಿ–ಕಿರೀಟ
ರಜನಿ–ರಾತ್ರಿ
ರದನ–ಹಲ್ಲು
ರವ–ಧ್ವನಿ

ರವೆಗಾಲು–ಪುಟ್ಟಹೆಜ್ಜೆ
ರಸಾಲ–ಮಾವು
ರಹಿ–ವೈಭವ
ರಾಗಿ–ಕಾಮಾಸಕ್ತ
ರಾಜಮರಾಳ–ರಾಜಹಂಸೆ
ರಾಧೇಯ–ಕರ್ಣ
ರಾಪು–ಪೀಡಿಸು
ರಾಮಧಾನ್ಯ–ರಾಗಿ
ರಾವುತ–ಕುದರೆ ಸವಾರ
ರಿಪು–ಶತ್ರು
ರೂಢಿ–ಭೂಮಿ
ರೆಂಚೆ–ಆನೆ ಕುದುರೆಗಳ ಹಕ್ಕರಿಕೆ, ಗುಳ
ಲಹರಿ–ಅಲೆ
ಲಜ್ಜೆ–ನಾಚಿಕೆ
ಲೋವೆ–ಇಳಿಜಾರಾದ ಸೂರು, ಅಡ್ಡ ಪಟ್ಟಿ
ವಟಪತ್ರ–ಆಲದ ಎಲೆ
ವನಜ–ತಾವರೆ
ವನಜನಾಭ–ತಾವರೆ ಹೊಕ್ಕುಳವ (ವಿಷ್ಣು)
ವನಧಿ–ಸಮುದ್ರ
ವರದ–ವರಗಳನ್ನು ಕೊಡುವವನು
ವರನಿಟಿಲಾಕ್ಷಸಖ–ಹಣೆಗಣ್ಣುಳ್ಳ ಶಿವನ ಸ್ನೇಹಿತ (ವಿಷ್ಣು)
ವರೂಢ–ರಥ
ವಸನ–ಬಟ್ಟೆ
ವಸು–ಅಪ, ದ್ರವ, ಸೋಮ, ಧನ, ಅನಿಲ, ಅನಲ, ಪ್ರತ್ಯುಕ್ಷ, ಪ್ರಭಾಸ ಎಂಬ ಎಂಟು ಮಂದಿ ದೇವತೆಗಳು
ವಸುಮತಿ–ಭೂಮಿ
ವಹಿಲ–ಶೀಘ್ರ, ಬೇಗ
ವಾಘೆ–ಕಡಿವಾಣ
ವಾಜಿ–ಕುದುರೆ
ವಾಯಸ–ಕಾಗೆ
ವಾರ್ಧಿಕ–ಮುಪ್ಪು
ವಾರಾನಾರಿ–ವೇಶ್ಯೆ
ವಾರಣ–ಆನೆ
ವಾರಿ–ನೀರು
ವಾರಿಧಿ–ಸಮುದ್ರ
ವಾಲಾಖ್ಯ–ನಳನ ಸ್ನೇಹಿತನ ಹೆಸರು
ವಾವೆವರ್ತನ–ಸಂಬಂಧಿಗಳ ಬಗ್ಗೆ ಎರಕ
ವಾಸವ–ಇಂದ್ರ
ವಾಸಿ–ಲೇಸು, ಖ್ಯಾತಿ, ಹೆಸರುಗಳಿಸಿದವ
ವಾಸುಕಿ–ಆದಿಶೇಷ
ವಿಕಳ–ಕೊರತೆ, ವಿಚಿತ್ರ, ಕಳೆದುಕೊಂಡವ
ವಿಗತ–ಪರಾಕ್ರಮಿ
ವಿಗಡಿಸು–ಗಾಬರಿಗೊಳಿಸು
ವಿಗತಿವಡೆ–ಮಂಕಾಗು
ವಿಟಾಳಿಸು–ಕುಲಗೆಡು, ಹಾಳಾಗು
ವಿತಳ–ಸರ್ಪಲೋಕ
ವಿದಗ್ಧ–ಪ್ರೌಢ
ವಿದಳಿತ–ಕತ್ತರಿಸಿದ
ವಿಪಿನ–ಕಾಡು
ವಿಬುಧ–ವಿದ್ವಾಂಸ, ಪಂಡಿತ
ವಿರಿಂಚಿ–ಬ್ರಹ್ಮ
ವಿಷಯಕೇಳಿ–ಕಾಮಲೀಲೆ

ವಿಹಿತ–ಯೋಗ್ಯ
ವೆಂಟಣಿಸು–ಆವರಿಸು
ವೆಗ್ಗಳಿಸು–ಹೆಚ್ಚಾಗು
ವ್ರೀಹಿ–ಬತ್ತ
ವ್ರಾತ–ಸಮೂಹ
ಶಬರ–ಬೇಡ
ಶರಹತಿ–ಬಾಣದ ಹೊಡೆತ
ಶರ್ವಾಣಿ–ಪಾರ್ವತಿ
ಶಶಿಕಾಂತ–ಚಂದ್ರಕಾಂತ
ಶಾಕಪಾಕ–ಸಸ್ಯಾಹಾರ
ಶೀತಾಂಶು–ಚಂದ್ರ
ಶುಕ–ಗಿಳಿ
ಶೂಲಪಾಣಿ–ಶಿವ
ಶೋಕಾಬ್ಧಿ–ಶೋಕಸಾಗರ
ಶ್ರೋಣಿ–ನಿತಂಬ, ಪೃಷ್ಠ
ಶ್ರುತಿ–ವೇದ
ಸಂಕಲ್ಪ–ಪ್ರತಿಜ್ಞೆ
ಸಂಗರ, ಸಂಗ್ರಾಮ–ಯುದ್ಧ
ಸಂಚಿತ–ಕೂಡಿಸಿಕೊಂಡ, ಆರ್ಜಿಸಿದ
ಸಂಜನಿಸು–ಹುಟ್ಟು
ಸಂಜಾತೆ–ಮಗಳು
ಸತ್ತಿಗೆ–ಛತ್ರಿ
ಸನ್ನುತ–ಹೊಗಳುವಂಥ
ಸಬಳ–ಈಟಿ
ಸಮತಳಿಸು–ಕೂಡಿಬರು
ಸಮಪಾಳಿ–ಸರಿಸಮಾನ
ಸಮರ–ಯುದ್ಧ
ಸವಡಿನುಡಿ–ಇಬ್ಬಗೆಯ ಮಾತು, ಎರಡು ಮಾತು
ಸಾಗರನ ಮಗಳು–ಲಕ್ಷ್ಮೀ
ಸಾರಣೆ–ನೆಲಸಾರಿಸುವುದು
ಸಾರಿ–ಪಗಡೆದಾಳ
ಸಿಂಧ–ಬಾವುಟ
ಸಿಂಧುಬಂಧನ–ಸಮುದ್ರಕ್ಕೆ ಸೇತುವೆ ಕಟ್ಟಿದವನು
ಸಿಂಹಪೀಠ–ಸಿಂಹಾಸನ
ಸಿತಚಾಮರ–ಬಿಳಿಯಚಾಮರ
ಸಿತಾಬ್ಜ–ಬಿಳಿಯ ತಾವರೆ
ಸೀಗುರಿ–ಚಾಮರ
ಸುಕರ–ಸರಾಗ
ಸುಕೃತ–ಪುಣ್ಯ
ಸುರುಚಿರ–ಮನೋಹರ
ಸುತ್ರಾಮ–ದೇವೇಂದ್ರ
ಸುಮನಸ–ದೇವತೆ
ಸುಮಾಲ್ಯ–ಹೂಮಾಲೆ
ಸುಮ್ಮಾನ–ಹರ್ಷ
ಸುರಗಿ–ಸಣ್ಣಕತ್ತಿ
ಸೂತ–ಸಾರಥಿ
ಸೂನಗಿ–ಕತ್ತಿ
ಸೂಪಕಾರ–ಅಡುಗೆಯವ
ಸೆಳ್ಳುಗುರು–ಚೂಪಾದ ಉಗುರು
ಸೇದು–ಸೆಳೆ
ಸೇಸೆ–ಅಕ್ಷತೆ
ಸೈಗೆಡೆ–ಸಾಷ್ಟಾಂಗ ನಮಸ್ಕಾರ ಮಾಡು
ಸೋಜಿಗ–ಆಶ್ಚರ್ಯ
ಸೋರ್ಮುಡಿ–ಸಡಿಲವಾಗಿ ಕಟ್ಟಿದ ತುರುಬು
ಸೋಹು– ಬೇಟೆಯಲ್ಲಿ ‘ಸೂಸೂ’

ಎಂದು ಶಬ್ದ ಮಾಡುತ್ತಾ
ಮೃಗಗಳನ್ನು ಅಟ್ಟುವುದು
ಹಕ್ಕೆ–ಆಶ್ರಯ, ನೆಲೆ
ಹಚ್ಚಡ–ಹೊದಿಕೆ, ದುಪ್ಪಟ
ಹದನು–ರೀತಿ
ಹಡಪ–ಚೀಲ
ಹಮ್ಮಳಿಸು–ಸೊಕ್ಕುಮುರಿ
ಹಮ್ಮು–ಹೂಡು, ಜೋಡಿಸು
ಹರಣ–ಪ್ರಾಣ
ಹರಿ–ಓಡು, ಪಲಾಯನ
ಹರಿಗೆ–ಗುರಾಣಿ
ಹರಿಯ ಮಧ್ಯ–ಸಿಂಹದ ಸೊಂಟ,
ಬಡನಡು
ಹರಿವು–ಆಗುಮಾಡು, ಪೂರ್ಣಗೊಳಿಸು
ಹವಣು–ಪ್ರಮಾಣ, ಲೆಕ್ಕ, ಅಳತೆ,
ಹಂಚಿಕೆ
ಹಲ್ಲಣಿಸು–ಸಿದ್ಧವಾಗು, ಹಲ್ಲಣ
(ಜೇನು) ಹಾಕುವುದು
ಹಲುಬು–ಕೊರಗು, ದುಃಖ
ಹಸಾದ–ಅಪ್ಪಣೆ
ಹಸ್ತಿವಾಹನ–ಇಂದ್ರ
ಹಳುವ–ಅರಣ್ಯ
ಹಾಸಂಗಿ–ಪಗಡೆದಾಳ, ಲೆತ್ತ
ಹಾಸರೆ–ಹಾಸುಬಂಡೆ
ಹಿಮಾಂಶುಕುಲ–ಚಂದ್ರವಂಶ
ಹಾಹೆ–ಗೊಂಬೆ
ಹಿಂತಾಲ–ಒಂದು ಜಾತಿಯ
ತಾಳೆಮರ, ಕಿರುತಾಳೆ
ಹಿರಣ್ಯ–ಚಿನ್ನ
ಹುಡಿ–ಮಣ್ಣು, ದೂಳು
ಹುತವಹನ–ಅಗ್ನಿ
ಹುರುಳು–ಸಾರ, ಶಕ್ತಿ
ಹೂಂಕರಿಸು–ರೋಷದಿಂದ ಕೂಗು
ಹೇವರಿಸು–ಜುಗುಪ್ಸೆ ಪಡು
ಹೃತಸುಖ–ಸುಖದಿಂದ ವಂಚಿತ,
ಸುಖನೀಗಿಕೊಂಡ
ಹೆಬ್ಬಲ–ದೊಡ್ಡಸೇನೆ
ಹೊಂಪುಳಿ–ರೋಮಾಂಚನ
ಹೊದರು–ಪೊದೆ
ಹೊದ್ದು–ಉಂಟಾಗು
ಹೊನಲು–ಪ್ರವಾಹ
ಹೊಯ್ಲು–ಹೊಡೆತ, ಪೆಟ್ಟು
ಹೊರಳು–ವ್ಯಾಪಕತೆ, ಬಾಗುವಿಕೆ,
ಉರುಳುವುದು
ಹೊರಿಗೆ–ಹೋರಾಟ, ಸ್ಪರ್ಧೆ
ಹೊರೆ–ಪೊರೆ, ಕಾಪಾಡು, ಕೂಡು,
ಸೇರು
ಹೊಲಬು–ಕ್ರಮ, ದಾರಿ
ಹೊಳಲು–ಪಟ್ಟಣ